# ಮುನ್ನುಡಿ

ಭಾರತಖಂಡದ ಯಾವುದೇ ಸಭ್ಯ ಭಾಷೆಯದಾಗಲಿ ಸಾಹಿತ್ಯದ ಓದುಗನಿಗೆ ಒಂದಲ್ಲ ಒಂದು ಸಂಜ್ಞೆ ಅಲ್ಲಲ್ಲಿ ಬಂದೇ ಬರುತ್ತದೆ. ಅದರ ಅರ್ಥವನ್ನು ತಿಳಕೊಳ್ಳುವರೆ ಸಂಜ್ಞಾರ್ಥದ ನೆರವಿಲ್ಲದೆ ತೀರದು. ಅಥವಾ ಬೇರಾವ ಸಾಧನವಿದೆ? ಹಳೆಯ ಪಂಡಿತರಲ್ಲಾದರೋ ಹಲವರಿಗಾದರೂ ಸಂಜ್ಞಾರ್ಥಗಳು ಕಂಠಪಾಠವಾಗಿರಬಹುದು. ಕೇಳು ಕೇಳುವೊಂದಿಗೆ ಆಶ್ಚರ್ಯ ಮಳೆಯಂತೆ ಅವರ ಬಾಯಿಂದ ಸುರಿಯುತ್ತಿರಬಹುದು. ಇಂದಿಗಾದರೆ ಆಯಾ ವಿಷಯಕ್ಕೆಂದು ಕಟ್ಟಿಟ್ಟ ಅಚ್ಚಾದಗ್ರಂಥಗಳು ಹುಟ್ಟಿ, ಕಂಠಪಾಠದ ದಿನಗಳು ಮುಗುಚಿಹೋದುವು. ಆ ಕ್ರಮವೂ ಜಗಳಿಹೋಯಿತು. ಅಥವಾ ಹೋದಂತೆಯೇ. ಹೇಗೂ ಅವನ್ನು ಮತ್ತೊಮ್ಮೆ ಎತ್ತಿ ನಿಲ್ಲಿಸುವುದಾದರೊ ಈ ಸೂರ್ಯಚಂದ್ರರು ಬೆಳಗುತ್ತಿರುವ ವರೆಗಲ್ಲ. ಈಗಣದೆಂದರೆ ಅಚ್ಚಾದ ಗ್ರಂಥಗಳ ಕಾಲ; ಈಗಣ ಓದುಗರಿಗೆ ಬೇಕಾದುವೆಂದರೆ ವಿಷಯ-ವಿಷಯಗಳ ಮೇಲಣ ಅಚ್ಚಿನ ಗ್ರಂಥಗಳು. ಅಂಥವಲ್ಲಿ ಓದುಗರ ನೆರವಿನ ಮಟ್ಟಿಗೆ ಮೊದಲನೆಯದೆಂದರೆ **ಶಬ್ದಕೋಶ,** ಹಾಗೂ ಅದರಷ್ಟೇ ಆವಶ್ಯಕತೆಯ **"ಸಂಜ್ಞಾರ್ಥಕೋಶ".** ಕನ್ನಡದಲ್ಲಿ ಸಂಜ್ಞೆಗಳದೊಂದು ಕೈಪಿಡಿ ನಾನು ಬಲ್ಲಷ್ಟರ ಮಟ್ಟಿಗೆ ಎಷ್ಟೋಕಾಲದಿಂದ ಇದ್ದಿಲ್ಲದ ಕೊರತೆಯನ್ನೂ ತನ್ನಿಮಿತ್ತ ಓದುಗರಿಗೆ ಉಂಟಾಗುತ್ತಿದ್ದ ತೊಡಕನ್ನೂ **ವಿದ್ವಾನ್ ಶ್ರೀ ಡಿ. ವಿ. ಹೊಳ್ಳರು** ಈ ಗ್ರಂಥದ ದ್ವಾರಾ **ಹೋಗಲಾಡಿಸಿದ್ದಾರೆ.** ಆ ಪ್ರಯುಕ್ತ ಸಮಗ್ರ ಕನ್ನಡನಾಡಿನ ಏಕಕಂಠವಾದ **ಕೃತಜ್ಞತೆಗೆ ಪಾತ್ರರಾಗಿರುತ್ತಾರೆ.** ಅವರನ್ನು ಮನಸಾರೆ ಅಭಿನಂದಿಸುತ್ತೇನೆ.

ಸಂಜ್ಞಾರ್ಥಕೋಶ ಎಷ್ಟೋಕಾಲದಿಂದಇದ್ದಿಲ್ಲ ಎಂದೆನಲ್ಲ? ಹಾಗಾದರೆ ಹಿಂದೊಮ್ಮೆ ಅಂತಹದೊಂದು ಕೋಶವಿತ್ತೇ? ಇತ್ತು. **ಮಂಗಳೂರಿನ ಬಾಸೆಲ್ ಮಿಶನ್ ಹಾಯ್ ಸ್ಕೂಲಿನ ಕನ್ನಡಪಂಡಿತರಾಗಿದ್ದ ಕೈ. ವಾ. ಶ್ರೀ ಬೋಳಾರ ರಾಮಕೃಷ್ಣಯ್ಯನವರು** ಕಳೆದ ೧೯ನೇ ಶತಮಾನದ ಕೊನೆಯಲ್ಲೇನೋ ಗಾತ್ರದಲ್ಲಿ ಅಷ್ಟೇನೂ ಹಿರಿದಲ್ಲದ **"ನಾನಾರ್ಥ ಶಬ್ದಾವಳಿ"** ಎಂಬ ಕನ್ನಡ—ಕನ್ನಡದೊಂದು **ಕೋಶವನ್ನು** ರಚಿಸಿದರು. ಅದನ್ನು ಮಂಗಳೂರು ಬಾಸೆಲ್ ಮಿಶನ್ ಗ್ರಂಥಶಾಲೆಯವರು ಪ್ರಕಟಿಸಿದರು. ನಮ್ಮ ಚಿಕ್ಕಂದಿನಲ್ಲಿ ಅದೇ ನಮಗಿದ್ದ ಅಮೂಲ್ಯವೂ ಅದ್ವಿತೀಯವೂ ಆದ ಕೋಶ. ಅದರಲ್ಲೇ ಪರಿಶಿಷ್ಟವಾಗಿ ಸಂಜ್ಞಾರ್ಥಕೋಶವನ್ನು ತಗಲುಹಾಕಿದ್ದಿತು. ಅದರಲ್ಲಿ **೧ರಿಂದ ೬೪ರ** ವರೆಗಣ (ಎಂದು ನನ್ನನೆನಪು) ಸಂಜ್ಞೆಗಳನ್ನೆಲ್ಲಾ ಯಥಾ ಸಂಖ್ಯಾವಾಗಿ ಸೂತ್ರಿಸಿದ್ದಿತು. ಆದರ ಪ್ರತಿಗಳಾದರೆ ಯಾವಂದೊ ಮುಗಿದು ಹೋಗಿವೆ. ಅದರ ಆಚೆಯೂ ಅದರ ಈಚೆಯೂ ಅಚ್ಚಾದ ಕನ್ನಡ ಸಂಜ್ಞಾರ್ಥಕೋಶವನ್ನು ನಾನು ಈವರೆಗೆ ಕಂಡಿಲ್ಲ.

ಮಹಾರಾಷ್ಟ್ರಿಯಲ್ಲಾದರೆ ಅದರ ಸರಿಗಾಲದಲ್ಲೋ ಅಥವಾ ಅಲ್ಲಿಂದ ೪—೫ವರ್ಷಗಳ ಹಿಂದೊ ಮುಂದೊ ಅಂಗೈಗಾತ್ರದ ತಕ್ಕಷ್ಟು ದಟ್ಟವಾದೊಂದು ಸಂಜ್ಞಾರ್ಥಕೋಶ ಪ್ರಕಟವಾಗಿದ್ದಿತು. ಅದರಲ್ಲಿ ತೀವಿದ ವಿಷಯ ಸಂಗ್ರಹವಾದರೊ ನಾನಾರ್ಥಶಬ್ದಾವಳಿಯಲ್ಲಿಯ ಸಂಗ್ರಹಕ್ಕಿಂತ ಪ್ರಾಯಶಃಪುಷ್ಟತರವಾಗಿತ್ತು. ಬೇರೆ ಸಂಜ್ಞಾರ್ಥಕೋಶಗಳನ್ನು ನಾನರಿಯೆ.

ಹೀಗೆ ನಾನಾರ್ಥಶಬ್ದಾವಳಿ ಹುಟ್ಟಿದ ೬೦ ವರ್ಷಗಳ ಸರಿಸುಮಾರಿನಲ್ಲಿ ಹುಟ್ಟಿರುವ ಈ ಸಂಜ್ಞಾರ್ಥಕೋಶಕ್ಕೆ ಕನ್ನಡದಲ್ಲಿ **ಕನ್ನಡ ನಾಡಿನಲ್ಲಿ ಸ್ವಾಗತ, ತ್ರಿಧಾ ಸ್ವಾಗತವೇ ಸರಿ.** ಈ ಕೋಶ ಕನ್ನಡಸಾಹಿತಿಗಳ ಹಾಗೂ ಸಾಹಿತ್ಯದ ಓದುಗರ ಮೆಚ್ಚಿಗೆಗೆ ಪಾತ್ರವಾಗಿ ಯಶಸ್ವಿಯಾಗಿ ಕನ್ನಡನಾಡಿನಲ್ಲಿ ಚಿರಕಾಲ ಬಾಳುತ್ತಿರಲಿ ಎಂದು ಹಾರೈಸುತ್ತೇನೆ.

ಇತಿ ಶಮ್

**ಗೋವಿಂದ ಪೈ.**



# ನಿವೇದನ

ಇದು ಶಾಸ್ತ್ರ, ಪುರಾಣ, ಇತಿಹಾಸಾಗಮ, ಕಾವ್ಯನಾಟಕಾದಿ ಗ್ರಂಥಗಳಲ್ಲಡಕವಾದ ಸಂಜ್ಞಾರ್ಥಸಂಗ್ರಹ; ಇದರಲ್ಲಿ ಜೈನ, ಬೌದ್ಧ, ಶೈವ, ವೈಷ್ಣವಾದಿ ನಾನಾಮತ ಧರ್ಮ-ತತ್ವವಿಷಯಗಳಿವೆ. ಸರ್ವಸಾಮಾನ್ಯ ವಾಚಕರಿಗೆಲ್ಲಾ ಮನಗಾಣುವಂತೆ ಸಂಕ್ಷಿಪ್ತ ರೂಪದಿಂದ ನಿರೂಪಿಸಲಾಗಿದೆ; ಹಾಗೂ ಸ್ವತಃ ಓದಿ ತಿಳಿಯಲು ಸುಲಭವಾಗುವಂತೆ ತತ್ವಾರ್ಥಬೋಧಕ ಸಂಖ್ಯಾವಿಶಿಷ್ಟವಾಚಕ ಸಂಕೇತಗಳನ್ನು ವರ್ಣಸಂಖ್ಯಾನುಕ್ರಮವಾಗಿ ಕ್ರೋಢೀಕರಿಸಲಾಗಿದೆ. ಆದರೆ ಕಾರಣಾಂತರಗಳಿಂದ ಎಷ್ಟೋ ವಿಷಯಗಳನ್ನು ಉದ್ಧರಿಸಲಾಗಲಿಲ್ಲ. ಲೋಪದೋಷಗಳೂ ಕೂಡಾ ಇದ್ದಿರಬಹುದು; ಗುಣಗ್ರಾಹಿಗಳಾದ ಸುಹೃದಯರು ದೋಷಗಳನ್ನೆಲ್ಲಾ ಮನ್ನಿಸಿ ನನ್ನೀಸೇವೆ ಯಶಸ್ವಿಯಾಗುವಂತೆ ಸಾದರಸಹಕಾರವಿತ್ತು ಅನುವಾಗದಿರಲಾರರೆಂಬ ಆತ್ಮವಿಶ್ವಾಸವಿದೆ.

ಮತ್ತು ದ್ವಿತೀಯಾವೃತ್ತಿಯಲ್ಲಿ ಇನ್ನಷ್ಟು ವಿಷಯಗಳಿಂದ ಕೂಡಿ, ಸುಧಾರಿತ ರೀತಿಯಿಂದ ಪರಿಷ್ಕೃತವಾಗಿ ಪ್ರಕಟಿಸುವ ಭಾಗ್ಯವೊದಗುವ ಹಾಗೆ ಸದಭಿಮಾನಿಗಳಾದ ವಿದ್ವಜ್ಜನರು ತಮ್ಮ ಉದಾರಾಶ್ರಯವಿತ್ತು ನೆರವಾಗುವಂತೆ ಸವಿನಯಪೂರ್ವಕ ಪ್ರಾರ್ಥಿಸುತಿದ್ದೇನೆ.

ಈ ಹೊತ್ತಗೆಯ ಪ್ರಕಟಣ ಕಾರ್ಯದಲ್ಲಿ ನೆರವಾದ ಸಹೋದ್ಯೋಗಿಗಳಿಗೂ "ಅಜಂತ ಮುದ್ರಣ" ಮಾಲಿಕರಿಗೂ ತುಂಬಾ ಆಭಾರಿಯಾಗಿದ್ದೇನೆ.

ಇನ್ನು ನನ್ನೀಪರಿಶ್ರಮದ ಮೇಲಿನ ಸದಭಿಮಾನ-ಪ್ರೀತಿ ಪುರಸ್ಸರವಾಗಿ ಅಮೂಲ್ಯವಾದೊಂದು ಮುನ್ನುಡಿಯನ್ನು ಬರೆದುಕೊಟ್ಟು ಪ್ರೋತ್ಸಾಹಿಸಿದ ಮದ್ರಾಸ್ ಪ್ರಾಂತದ ರಾಷ್ಟ್ರಕವಿಗಳೂ, ಸುಪ್ರಸಿದ್ಧ ಹಿರಿಯ ಸಾಹಿತ್ಯ ಶೋಧಕರೂ ಆದ **ಶ್ರೀಮಾನ್ ಮಂಜೇಶ್ವರ ಗೋವಿಂದ ಪೈಗಳವರಿಗೆ** ತ್ರಿಕರಣಪೂರ್ವಕ ಅಭಿನಂದಿಸುತ್ತಾ ಸದಾ ಕೃತಜ್ಞನಾಗಿರುತ್ತಿದ್ದೇನೆ.

ಇತಿ,

ವಿಜಯ ಸಂ|ದ ವೈಶಾಖ ಶು. ೧೩.
ತಾ. 26—5—1953.

**ವಿದ್ವಾನ್—ಡಿ. ವಿ. ಹೊಳ್ಳ.**
ಕುಂದಾಪುರ, ದ. ಕ.
(ಲೇಖಕ—ಪ್ರಕಾಶಕ)

# ಸಂಜ್ಞಾರ್ಥ - ತತ್ವಕೋಶ

ಏಕತತ್ವ—ಬ್ರಹ್ಮಂ.

ದ್ವಿವಿಧ ಕಾಲಭೇದ—(ಜೈ) ಉತ್ಸರ್ಪಿಣಿ, ಅವಸರ್ಪಿಣಿ.

ಅಂತರ್ಭೇದಗಳು—ಸುಷಮ ಸುಷಮ, ಸುಷಮ, ಸುಷಮ ದುಷಮ, ದುಷಮ ಸುಷಮ, ದುಷಮ, ದುಷಮ ದುಷಮ,(ಹೀಗೆ ಕಲ್ಪಕಾಲದಲ್ಲಿ ಷಡ್ಭೇದಗಳಿವೆ.)

ದ್ವಿವಿಧಕಾರ್ಯ—(ಪ್ರಕೃತಿ ಪರ) ಭೋಗ, ಅಪವರ್ಗ.

,, ಬುದ್ಧಿ—ಸಂಶಯಾತ್ಮಾ (ಅಪ್ರಮಾ-ಅವಿದ್ಯೆ) ನಿಶ್ಚಯಾತ್ಮಾ (ಪ್ರಮಾ)

,, ಗಣ—ವರ್ಣಗಣ, ಮಾತ್ರಾಗಣ.

,, ಗತಿ—ಐಹಿಕ. ಆಮುಷ್ಮಿಕ (ಲೋಕ— ಇಹ, ಪರ. ಜೀವನಗತಿ—ಸುಖಮಯ ದುಃಖಮಯ. (ಭೋಗ) ಕಾರಣ -- ಪುಣ್ಯ, ಪಾಪ. ಸ್ಥಾನ—ಸ್ವರ್ಗ, ನರಕ.

ದ್ವಿವಿಧ ಛಂದಸ್ಸು—ವೈದಿಕ (ವೇದ) ಲೌಕಿಕ (ಇತಿಹಾಸ, ಪುರಾಣ)

,, ಜ್ಞಾನ—ಶಾಸ್ತ್ರಜ, ವಿವೇಕಜ.

,, ತತ್ವ—ಸ್ವತಂತ್ರ,(ಬ್ರಹ್ಮ) ಅಸ್ವತಂತ್ರ. (ಜಗತ್)

,, ತಾಪ—1 ಶಾರೀರಿಕ, 2 ಮಾನಸಿಕ. (1) ಜ್ವರ, ಶೂಲೆ, ಶಿರೋರೋಗ, ಭಗಂದರ, ಅರ್ಶ, ಶ್ವಾಸ, ವಮನ, ನೇತ್ರರೋಗ, ಅತಿಸಾರ, ಕುಷ್ಠಾದಿ. (2) ವಿಷಾದ, ಅಸೂಯೆ, ಅಪಮಾನ, ಈರ್ಷ್ಯಾ, ಪರಾಭವ, ಕಾಮಕ್ರೋಧಾದಿಗಳತಾಪ.

ದ್ವಿವಿಧ ದುಃಖ - ಆಧಿ(ಮಾನಸಿಕ) ವ್ಯಾಧಿ (ಶಾರೀರಿಕ)

,, ಧರ್ಮ—ಸ್ವಧರ್ಮ, ಪರಧರ್ಮ.(ವಿಧರ್ಮ)

,, ನೃತ್ಯ—ಮಾರ್ಗ (ಭಾವಾಯತ್ತ) ದೇಶಿ (ತಾಳಲಯಾಯತ್ತ)

,, ಪಂಥ—ಶೈವ, ವೈಷ್ಣವ. ಜೈ.-ಶ್ವೇತಾಂಬರ, ದಿಗಂಬರ. ಬೌ.-ಹೀನಯಾನ, ಮಹಾಯಾನ.

ದ್ವಿವಿಧ ಪುರುಷಾರ್ಥ—(ಶೈವ) 1 ಅನಾತ್ಮಕ 2 ಸಾತ್ಮಕ. 1 ದುಃಖಾಂತ— ದೃಕ್ ಶಕ್ತಿ, ಕ್ರಿಯಾಶಕ್ತಿ. ದೃಕ್‌ಶಕ್ತಿ—ದರ್ಶನ, ಶ್ರವಣ, ಮನನ, ವಿಜ್ಞಾನ, ಸರ್ವಜ್ಞತ್ವ

ದ್ವಿವಿಧ ಪ್ರಮೇಯ—ಭಾವ, ಅಭಾವ. (ಭಾವ—ಚೇತನಾಚೇತನ)

,, ಪ್ರತ್ಯಕ್—ಜೀವ, ಈಶ್ವರ.

,, ಭಕ್ತಿ - ಸಾಧನಭಕ್ತಿ, ಫಲ ಭಕ್ತಿ.(ಮರ್ಕಟಕಿಶೋರಭಕ್ತಿ, ಮಾರ್ಜಾಲಕಿಶೋರ ಭಕ್ತಿ.)

ದ್ವಿವಿಧಮಾರ್ಗ—(ಲೌಕಿಕ)ಶ್ರೇಯ, ಪ್ರೇಯ. (ವೈದಿಕ)ಅರ್ಚಿರಾದಿ, ಧೂಮಮಾರ್ಗ.

ದ್ವಿವಿಧ ವರ್ಣಗಳು—ಸ್ವರ, ವ್ಯಂಜನ (ವ್ಯಂಜನ-ವರ್ಗೀಯ, ಅವರ್ಗೀಯ)
ಉಚ್ಚಾರಣ ಯತ್ನಭೇದ—1 ಬಾಹ್ಯ 2 ಅಭ್ಯಂತರ. 1 ಪಂಚವಿಧ—ಸ್ಪೃಷ್ಟ, ಈಶಸ್ಪೃಷ್ಟ, ವಿವೃತ, ಈಶದ್ವಿವೃತ, ಸಂವೃತ. 2. (11ವಿಧ)ವಿವರ, ಸಂವಾರ, ಶ್ವಾಸ,ನಾದ,ಘೋಷ, ಅಘೋಷ, ಅಲ್ಪಪ್ರಾಣ, ಮಹಾಪ್ರಾಣ, ಉದಾತ್ತ, ಅನುದಾತ್ತ, ಸ್ವರಿತ.

ದ್ವಿವಿಧ ವಸ್ತುಗಳು—ಜಂಗಮ, ಸ್ಥಾವರ.(ಚರ, ಅಚರ)
,, ವಾಸನೆ—ಸ್ಮೃತಿಫಲ, ಭೋಗಫಲ.
,, ವಿದ್ಯೆ—ಶಬ್ದಬ್ರಹ್ಮ, ಬ್ರಹ್ಮವಿದ್ಯೆ.
,, ವಿಜ್ಞಾನ - ಆಲಯ ವಿಜ್ಞಾನ, ಪ್ರವೃತ್ತಿ ವಿಜ್ಞಾನ.(ಬೌ)
,, ಶಕ್ತಿ—ವಾಮ, ದಕ್ಷಿಣ.
,, ಶರೀರ— ಯೋನಿಜ, ಅಯೋನಿಜ. ಯೋನಿಜ:—ಜರಾಯುಜ, ಅಂಡಜ. ಅಯೋನಿಜ:-ಉದ್ಭಿಜ, ಸ್ವೇದಜ.

ದ್ವಿವಿಧಶ್ರೋತೃಗಳು—1ಪ್ರವರ 2 ಅವರ (1) 4ವಿಧ- ಚಾತಕ, ಶುಕ, ಹಂಸ, ಮತ್ಸ್ಯ ವರ್ಗ (2) ವೃಕ, ಭೇರುಂಡ, ವೃಷ, ಉಷ್ಟ್ರವರ್ಗ.
ದ್ವಿವಿಧ ಸಮಾಧಿ—1ಸಂಪ್ರಜ್ಞಾತ, ಅಸಂಪ್ರಜ್ಞಾತ. 2 ಸವಿಕಲ್ಪ, ನಿರ್ವಿಕಲ್ಪ.
,, ಸೃಷ್ಟಿ—ವ್ಯಷ್ಟಿ, ಸಮಷ್ಟಿ.ಪದಾರ್ಥಭೇದ-ಜಡ, ಚೇತನ(ನಿರಿಂದ್ರಿಯ,ಸೇಂದ್ರಿಯ)
ಅನಾದಿ ತತ್ವಭೇದ—ಪ್ರಕೃತಿ, ಪುರುಷ.
ಅಯನದ್ವಯ—ಉತ್ತರಾಯಣ, ದಕ್ಷಿಣಾಯನ.
ಅಲಂಕಾರಭೇದ—ಅರ್ಥಾಲಂಕಾರ, ಶಬ್ದಾಲಂಕಾರ.
ಅಶ್ವಭೇದ—ಅಜಾನೇಯ, ವನಾಯುಜ.
ಅಕ್ಷರಭೇದ—ಶ್ರಾವಣ, ಚಾಕ್ಷುಷ.
ಆದಿಕವಿದ್ವಯರು—ವಾಲ್ಮೀಕಿ, ವ್ಯಾಸ. ಕಾವ್ಯ-ರಾಮಾಯಣ, ಮಹಾಭಾರತ.
ಈಶ್ವರಾನುಗ್ರಹಸಾಧನ ದ್ವಯ -- ಯೋಗ, ವಿಧಿ.
ಉಭಯ ವ್ಯಾಕರಣ—ಜೈನೇಂದ್ರ, ಪಾಣಿನೀಯ.
ಚಿಚ್ಛಕ್ತಿಭೇದ—ಶಕ್ತಿ(ಪ್ರವೃತ್ತಿ-ಲಿಂಗಸ್ಥಲಾಶ್ರಯ)ಭಕ್ತಿ(ನಿವೃತ್ತಿ-ಅಂಗಸ್ಥಲಾಶ್ರಯ) ಶೈ.
ಪಕ್ಷದ್ವಯ—ಶುಕ್ಲ(ಶುದ್ಧ) ಕೃಷ್ಣ(ಬಹುಳ)
ಪರತತ್ವದ್ವಯ—ಶೈ. ಲಿಂಗಸ್ಥಲ,ಅಂಗಸ್ಥಲ. ದರ್ಶನ—ತತ್ವಸಂಪತ್, ಸಾಧನಸಂಪತ್, (ಲಿಂಗಾಂಗಗಳು ಮೂರುಮೂರಾಗಿ 36, 101, 216ರ ವರೆಗಾದುವು)
ಪರಮಸ್ವರೂಪ -- ಸಗುಣ, ನಿರ್ಗುಣ. (ವ್ಯಕ್ತಾವ್ಯಕ್ತ)
ಪರಮಪ್ರಾಪ್ತಿಯೋಗ—ಜ್ಞಾನಯೋಗ, ಕರ್ಮಯೋಗ.
ಕರ್ಮ—ಸಕಾಮ, ನಿಷ್ಕಾಮಕರ್ಮ. (ಸಾಲಂಬ, ನಿರಾಲಂಬ.)

ಪಾಕದ್ವಯ— ನಾಳಿಕೇರಪಾಕ, ದ್ರಾಕ್ಷಾಪಾಕ.
ಭಾರ್ಯಾಭೇದ—ಏಕಚಾರಿಣಿ, ಸಪತ್ನಿ.
ಮುಕ್ತಿದ್ವಯ—ಸದೇಹ (ಜೀವನ್ಮುಕ್ತಿ), ವಿದೇಹ ಮುಕ್ತಿ.
ರಾಜವಂಶದ್ವಯ—ಸೂರ್ಯವಂಶ, ಚಂದ್ರವಂಶ.
ಗ್ರಂಥಭೇದ—ಕಾವ್ಯ, (ರಸಾತ್ಮಿಕ) ಶಾಸ್ತ್ರ. (ತತ್ವಾತ್ಮಿಕ)
ದ್ರವತ್ವದ ಗುಣದ್ವಯ—1 ಸಾಂಸಿದ್ಧಿಕ, ನೈಮಿತ್ತಿಕ, 2 ನಿತ್ಯ, ಅನಿತ್ಯ.
ವಿಭಾವದ್ವಯ—ಆಲಂಬನ, ಉದ್ದೀಪನ.
ಶ್ರುತಿಭೇದ—ವೈದಿಕೀ (ನಿಗಮ) ತಾಂತ್ರಿಕೀ (ಆಗಮ)
ಸೂತ್ರಭೇದಃ—ಶ್ರೌತ, ಸ್ಮಾರ್ತ.
ಸತ್ತಾಭೇದಃ—ರಾಜಾಯತ್ತ, ಪ್ರಜಾಯತ್ತ.
ತ್ರಿಕರಣ—ವಾಕ್. ಮನ, ಕಾಯ.
,, ಕರ್ಮ—ಯಜನ, ಅಧ್ಯಯನ, ದಾನ.
,, ಕಟುಕ—(ತ್ರ್ಯೂಷಣ) ಹಿಪ್ಲಿ, ಮೆಣಸು, ಶುಂಠಿ.
,, ಕಾಲ—ಭೂತ, ವರ್ತಮಾನ, ಭವಿಷ್ಯತ್.
,, ಗಣ (ತ್ರಿವರ್ಗ), ಧರ್ಮ, ಅರ್ಥ, ಕಾಮ, ಜ್ಯೋ:-ದೇವ, ರಾಕ್ಷಸ, ಮನುಷ್ಯ. ಮುಖ-ಅಧಃ, ತಿರ್ಯಕ್, ಊರ್ಧ್ವ.
ತ್ರಿಗತಿ—ಅರ್ಥಗತಿ, ಕರ್ಮಗತಿ, ದೈವಗತಿ.
ತ್ರಿಗುಣ—ಸತ್ವ, ರಜ, ತಮ. ವರ್ಣ—ಶ್ವೇತ, ರಕ್ತ. ಕೃಷ್ಣ.
ತ್ರಿಛಂದ—ಗಣ, ಮಾತ್ರಾ, ಅಕ್ಷರಛಂದ.
ತ್ರಿಜ್ಞಾನ—ಮತಿ, ಶ್ರುತ, ಅವಧಿಬೋಧ.
,, ಜ್ಯೋತಿ—ಸೂರ್ಯ, ಚಂದ್ರ; ಅಗ್ನಿ.
,, ದಂಡ—ವಾಗ್ದಂಡ, ಮನೋದಂಡ, ಕಾಯದಂಡ.
,, ಧಾತು—(ತ್ರಿದೋಷ) ವಾತ, ಪಿತ್ಥ, ಕಫ.
,, ನಾಡಿ—ಇಡಾ, ಪಿಂಗಲ, ಸುಷುಮ್ನ.
,, ಪಥ—(1) ಭೂ (ಮರ್ತ್ಯ) ವ್ಯೋಮ (ಸ್ವರ್ಗ) ಪಾತಾಳ. (ಅಧಃ) (2) ಭೂವ್ಯೋಮ ವಾಯುಮಂಡಲ.
,, ಪದಿ—ಧೃತಮಂಡಲಿ, ಮರಾಲಪದಿ, ಹಂಸಪದಿ.
,, ಪುಟಿ—(1) ಜ್ಞಾತೃ, ಜ್ಞಾನ, ಜ್ಞೇಯ. (2) ಧ್ಯಾತಾ, ಧ್ಯಾನ, ಧ್ಯೇಯ. (3) ದೃಷ್ಟಾ, ದರ್ಶನ, ದೃಶ್ಯ. (4) ಪುರುಷ, ಪರಮಪುರುಷ, ಸೃಷ್ಟಿ.
ತ್ರಿಪುರ— (ರಾಕ್ಷಸರು) ತಾರಕಾಕ್ಷ, ಕಮಲಲೋಚನ, ವಿದ್ಯುನ್ಮಾಲಿ, ಪಟ್ಟಣಗಳು:-

ಸ್ವರ್ಣ, ರಜತ, ಲೋಹನಿರ್ಮಿತ,

ತ್ರಿಪುರುಷರು—(ಶರಣರಲ್ಲಿ)ಅಲ್ಲಮ, ಬಸವ, ಚನ್ನಬಸವ.

,, ಫಲ—ನೆಲ್ಲಿ, ಸಾಂತಿ, ಅಣಿಲೆ.

,, ಪ್ರಮಾಣ—1 ಪ್ರತ್ಯಕ್ಷ, ಅನುಮಾನ, ಶಬ್ದ. (ಶಿವಾದ್ವೈತ) 2 ತ್ರಿಶ್ರ, ಚತುರಸ್ರ, ಮಿಶ್ರ. (ಸಂಗೀತ)

ತ್ರಿಪ್ರಸಾದ—ಶುದ್ಧ, ಸಿದ್ಧ, ಪ್ರಸಿದ್ಧ. (ಗುರುಭುಕ್ತಶೇಷ, ನೈವೇದ್ಯ, ಜಂಗಮಭುಕ್ತಶೇಷ) ಶೈವಾಗಮ.

ತ್ರಿಮತ—ದ್ವೈತ, ಅದ್ವೈತ, ವಿಶಿಷ್ಟಾದ್ವೈತ. ಸ್ಥಾಪನಾಚಾರ್ಯರು:-ಮಧ್ವ, ಶಂಕರ, ರಾಮಾನುಜ.

ತ್ರಿಮಾತೃ—ಗೋ, ಭೂ, ಗಂಗಾ, (ಗೋ, ಭೂ, ವಾಣಿ.)

,, ಲಯ—ಧೃತ, ವಿಲಂಬಿತ, ಮಧ್ಯ. (ಸಂ)

,, ಲಿಂಗ—ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ. (ವ್ಯಾಕರಣ)

,, ಲೋಕ—ಸ್ವರ್ಗ, ಮರ್ತ್ಯ, ಪಾತಾಳ. (ಅಧಃ, ತಿರ್ಯಕ್, ಊರ್ಧ್ವ)

,, ಲೋಹ—ತಾಮ್ರ, ಸುವರ್ಣ, ರೂಪ್ಯ.

,, ವರ್ತ್ಮ—ದೇವಯಾನ, ಪಿತೃಯಾನ, ಯೋನಿಮಾರ್ಗ.

ತ್ರಿವಿಧಕಾಲ—ನಿತ್ಯ, ವಿಧಿ, ಭೂತಾದಿಕಾಲತ್ರಯ.

,, ಚಿಂತಾಕಾರಣ—ತೃಷ್ಣಾ, ಲೋಭ, ಮೋಹ.

,, ಜೀವ—ಬದ್ಧ, ಮುಕ್ತ, ನಿತ್ಯ. (ವಿ. ಅದ್ವೈತ)

,, ದೇಯವಸ್ತುಗಳು—ಉತ್ತಮ (ಗೋ, ಭೂ, ಸುವರ್ಣ, ಗೃಹ, ವಿದ್ಯೆ ಇತ್ಯಾದಿ) ಮಧ್ಯಮ, (ಅನ್ನ, ವಸ್ತ್ರ, ಅಶ್ವವಾಹನಾದಿ) ಕನಿಷ್ಠ (ಛತ್ರ, ಚಾಮರ,ದಧಿ, ಘೃತಾದಿ)

ತ್ರಿವಿಧ ಪದಾರ್ಥ—ಘನ, ದ್ರವ, ಅನಿಲ.(ಭೇದ) ಮೂಲ, ಯೌಗಿಕ. ಮಿಶ್ರಣ.

,, ಪಾಪಗಳು—1 ಸ್ಥೂಲ, ಸೂಕ್ಷ್ಮ, ಅತಿಸೂಕ್ಷ್ಮ 2 ಮಹಾಪಾತಕ, ಉಪಪಾತಕ ಸಾಮಾನ್ಯಪಾತಕ.

ತ್ರಿವಿಧಬಂಧಗಳು—ಜನ್ಮ, ಮೃತ್ಯು, ವಿವಾಹಬಂಧ.

,, ಬಾಲಾರಿಷ್ಟ—ಗಂಡಾರಿಷ್ಟ(ರಾತ್ರಿಗಂಡ, ದಿವಾಗಂಡ, ಮಧ್ಯಗಂಡ.) ಮಹಾರಿಷ್ಟ ಪತಾಕಾರಿಷ್ಟ.

ತ್ರಿವಿಧ ಭೀಭತ್ಸ—ಜಿಗುಪ್ಸಿತ, ಜಿಗುಪ್ಸಿತೇಕ್ಷಣ, ವಿರಕ್ತಿಭೀಭತ್ಸ. (ರಸ. ರ)

,, ಭೋಗ ಭೂಮಿ—ಉತ್ತಮ, ಮಧ್ಯಮ, ಜಘನ್ಯ. (ಜೈ)

,, ಯಜ್ಞ—ಇಷ್ಟಿ, ಪಶುಯಜ್ಞ, ಸೋಮಯಜ್ಞ.

,, ವೀರ—ದಾನವೀರ, ದಯಾವೀರ, ಉಭಯವೀರ.

,, ವೃತ್ತ—ಸಮ, ವಿಷಮ, ಅರ್ಧಸಮವೃತ್ತ. (ಛಂ)

,, ಸತ್—ಪಾರಮಾರ್ಥಿಕ,(ಅಬಾಧ್ಯ, ಬ್ರಹ್ಮ) ವ್ಯಾವಹಾರಿಕ, (ಬ್ರಹ್ಮಜ್ಞಾನದಿಂದ-ಬಾಧ್ಯ, ಆಕಾಶಾದಿ), ಪ್ರಾತಿಭಾಸಿಕ (ಜ್ಞಾನದಿಂದಬಾಧ್ಯ, ರಜತಾದಿ)

ತ್ರಿವಿಧಸ್ಥಲ—ಚಕ್ಷು, ಕಂಠ, ಹೃದಯ.

,, ಸ್ವಪ್ನ—ವಾತಿಕ, ಪೈತ್ತಿಕ, ಕಫಜ.

,, ಸ್ವರ—ಮೃದು, ಮಧುರ, ಮಂದ್ರ. (ಕಲ, ಮಂದ್ರ, ತಾರ.)

,, ಸ್ತ್ರೀಭೇದ—1 ಸಾಧ್ವೀ, ಭೋಗ್ಯ, ಕುಲಟ, 2 ಸ್ವಕೀಯೆ, ಪರಕೀಯೆ, ಪಣ್ಯೆ. ಅವಸ್ಥೆ:- ಮುಗ್ಧೆ, ಮಧ್ಯೆ, ಪ್ರಗಲ್ಭೆ.

ತ್ರಿವಿಧಾತ್ಮಾ—ವಿಶ್ವ, ತೈಜಸ, ಪ್ರಾಜ್ಞ.

ತ್ರಿವಿಧಾರ್ಥ—ವಾಚ್ಯ, ಲಕ್ಷ್ಯ, ವ್ಯಂಗ್ಯ. ಶಬ್ದ:-ವಾಚಕ, ಲಕ್ಷಕ, ವ್ಯಂಜಕ. ಸಾಮರ್ಥ್ಯ:-ಅಭಿಧಾ, ಲಕ್ಷಣಾ, ವ್ಯಂಜನಾವೃತ್ತಿ.

ತ್ರಿವಿಧಾಂಗ—ಕ್ರಿಯಾಂಗ, ಭೋಗಾಂಗ, ಭಾವಾಂಗ. (ಶೈ)

,, ಧಾಂದೋಲ—ದ್ವೀಪಿ, (ಪಾಂಡು), ಕಂಬಳ, ವಾಸ್ತ.

,, ಧೋದಕ,—ಮಂತ್ರೋದಕ, ಪರಮಪಾದೋದಕ, ಪ್ರಸಾದೋದಕ, (ಶೈ)

,, ವೇಣಿ—ಗಂಗಾ,ಯಮುನಾ, ಸರಸ್ವತಿ.

,, ವೇದ—(ತ್ರಯೀ)ಋಕ್, ಯಜು, ಸಾಮ.

,, ವ್ಯಾಹೃತಿ—ಭೂಃ, ಭುವಃ, ಸ್ವಃ

,, ಶಕ್ತಿ—ರೌದ್ರಿ, ಜೇಷ್ಠಾ, ವಾಮಾ,

,, ಸ್ಥಲೀ—ಕಾಶೀ, ಪ್ರಯಾಗ, ಗಯಾ.

,, ಸ್ವರ—ಉದಾತ್ತ, ಅನುದಾತ್ತ, ಸ್ವರಿತ.

,, ಸ್ಥಾಯಿ—ಮಂದ್ರ, ಮಧ್ಯ, ತಾರಾ.

,, ಸಂಧ್ಯಾ—ಪ್ರಾತಃ, ಮಧ್ಯಾಹ್ನ, ಸಾಯಂ.

ತ್ರೇತಾಗ್ನಿ—1 ಗಾರ್ಹಸ್ಪತ್ಯ, ಆವಹನೀಯ; ದಕ್ಷಿಣಾಗ್ನಿ. 2 ದರ್ಶನಾಗ್ನಿ, ಜ್ಞಾನಾಗ್ನಿ ಜಠರಾಗ್ನಿ ಸ್ಥಾನ:-ಹೃದಯ, ಮುಖ, ಜಠರ. ಸ್ಥಿತಿ:-ಗೋಚರ, ಕರ್ಮಪರಿಚಯ, ಜೀರ್ಣಕಾರಿ.

ತ್ರೇತಾತ್ಮಾ—ಜೀವ, ಪರಮ, ಅಂತರಾತ್ಮ (ಕ್ಷರ, ಅಕ್ಷರ, ಪರಮ)

ತೌರ್ಯತ್ರಿಕ—ನೃತ್ಯ, ಗೀತ, ವಾದ್ಯ.

ಅಕ್ಷರತ್ರಯ—ಅಕಾರ, ಉಕಾರ, ಮಕಾರ. (ವಿರಾಟ್, ಹಿರಣ್ಯಗರ್ಭ, ಈಶ್ವರ.)

ಅಜ್ಞಾನತ್ರಯ—ಮತ್ಯ, ಶ್ರುತಾ, ಅವಧ್ಯ.

ಅರ್ಥವಿಶೇಷತ್ರಯ—ವಿಧಿ, ನಿಷೇಧ, ಸಂಭವಾರ್ಥ. (ವ್ಯಾ)

**ಅಧ್ಯಾತ್ಮಶಾಸ್ತ್ರತ್ರಯೀ**— ಸಾಂಖ್ಯ, ಪಾತಂಜಲ, ವೇದಾಂತ.
**ಅರಮನೆಯಚಂದಗಳು**— ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ.
**ಅವಸ್ಥಾತ್ರಯ**— ಜಾಗರ, ಸ್ವಪ್ನ, ಸುಷುಪ್ತಿ. ಶಾರೀರಿಕ:-ಕಾರ್ಶ್ಯ, ಜಾಗರ, ಸಂತಾಪ. ವಯೋವಸ್ಥೆ:-ಬಾಲ್ಯ, ಯವ್ವನ, ವಾರ್ಧಕ್ಯ.
**ಅವಿದ್ಯಾಬುದ್ಧಿ**— ಸಂಶಯ, ವಿಪರ್ಯಯ, ಸ್ವಪ್ನ.
,, **ಶಕ್ತಿತ್ರಯ**— ಮಲ, ವಿಕ್ಷೇಪ, ಆವರಣ. ನಿವಾರಣೋಪಾಯ:-ನಿವೃತ್ತಿಕರ್ಮ, ಉಪಾಸನೆ, ತತ್ವಜ್ಞಾನ.
**ಅಂಗತ್ರಯ**— ತ್ಯಾಗಾಂಗ, ಭೋಗಾಂಗ, ಯೋಗಾಂಗ. (ಲಿಂಗಸ್ಥಲ-ಗುರು, ಜಂಗಮ ಆಚಾರಲಿಂಗ.) ವೀ. ಶೈ.
**ಆಚಾರ ಲಕ್ಷಣತ್ರಯ**— ಸದ್ವಂಶ, ವಿದ್ಯೆ. ಮನಃಶುದ್ಧಿ.
**ಈಷಣ(ಇಚ್ಛಾ)ತ್ರಯ**— ಅರ್ಥೇಷಣ, ಪುತ್ರೇಷಣ, ದಾರೇಷಣ.
**ಋಷಿವಿಭೇದತ್ರಯ**— ಬ್ರಹ್ಮರ್ಷಿ, ರಾಜರ್ಷಿ, ದೇವರ್ಷಿ.
**ಕಥಾತ್ರಯ**— ರಾಜಕಥೆ, ಭೋಗಕಥೆ, ಚೋರಕಥೆ.
**ಕರ್ಮತ್ರಯ**— ನಿತ್ಯ, ನೈಮಿತ್ತಿಕ, ಕಾಮ್ಯಕರ್ಮ.
**ಕರ್ಮಸಂಚಯತ್ರಯ**— ಪ್ರಾರಬ್ಧ, ಸಂಚಿತ, ಆಗಾಮಿ. (ಕರಣ, ಕರ್ಮ, ಕರ್ತೃ.)
**ಕವಿರತ್ನತ್ರಯ**— (ಕನ್ನಡ)ರನ್ನ, ಪೊನ್ನ, ಪಂಪ.
**ಕವಿಚಕ್ರವರ್ತಿತ್ರಯ**— ರನ್ನ, ಪೊನ್ನ, ಜನ್ನ. (ಕನ್ನಡ)
**ಕಾವ್ಯದೋಷವಿಭೇದತ್ರಯ**— ಪದದೋಷ, ಅರ್ಥದೋಷ, ರಸದೋಷ.
**ಕಾವ್ಯಭೇದತ್ರಯ**— 1 ಗದ್ಯ, ಪದ್ಯ, ಚಂಪು, (ವಸ್ತುಕ) 2 ಉತ್ತಮ,(ಧ್ವನಿಕಾವ್ಯ) ಮಧ್ಯಮ,(ಗುಣೀಭೂತವ್ಯಂಗ್ಯ) ಅಧಮ.(ಚಿತ್ರ)
**ಕಾವ್ಯಗುಣತ್ರಯ**— ಓಜಃ, ಪ್ರಸಾದ, ಮಾಧುರ್ಯ.
**ಕಾವ್ಯರೀತಿತ್ರಯ**— ಗೌಢಿ, ವೈದರ್ಭಿ, ಪಾಂಚಾಲಿ.
**ಕಾರಣತ್ರಯ**— ನಿಮಿತ್ತ, ಉಪಾದಾನ, ಸಹಕಾರಿಕಾರಣ.
**ಗಜಭೇದತ್ರಯ**— ಭದ್ರ, ಮಂದ್ರ, ಮೃಗಭೇದ. (ಅಂತರ್ಭೇದ:-ಭದ್ರಮಂದ್ರ, ಭದ್ರ ಮೃಗ, ಮೃಗಮಂದ್ರ, ಭದ್ರಮಂದ್ರಮೃಗ, ಸಂಕೀರ್ಣ)
**ಗುಪ್ತಿತ್ರಯ**— ಮನೋಗುಪ್ತಿ, ವಚನಗುಪ್ತಿ, ಕಾಯಗುಪ್ತಿ (ಜೈ.)
**ಚಕ್ರತ್ರಯ**— ದರಚಕ್ರ , ಕಾಲಚಕ್ರ, ವಿಷ್ಣುಚಕ್ರ,
**ಛಲತ್ರಯ** - ವಾಕ್ಛಲ, ಸಾಮಾನ್ಯ ಛಲ, ಉಪಚಾರಛಲ.
**ಜಾತಿತ್ರಯ**-- (ದೇವ)ಸಾತ್ವಿಕ:-ದೇವ, ಗಂಧರ್ವ, ಅಪ್ಸರ. ರಾಜಸ:-ಯಕ್ಷ, ಕಿನ್ನರ, ದೈತ್ಯ. ತಾಮಸ:-ರಾಕ್ಷಸ, ನಾಗ; ಪ್ರೇತ.

ಜ್ಞಾನಪೂಜಾವಿಧಿತ್ರಯ—(ಶೈವ)ತೇಜೋಮಯಶಿವನೇ ಲಿಂಗವೆಂಬ ಭಾವನಾಪೂಜೆ, (ಶುದ್ಧ)ಪಂಚಮುಖಶಿವನೇ ಲಿಂಗವೆಂದುಪೂಜಿಸುವಿಕೆ (ಮಿಶ್ರ) ಹರಿಬ್ರಹ್ಮಾನ್ವಿತ ಮಹೇಶ್ವರನೇ ಲಿಂಗವೆಂದು ಪೂಜಿಸುವಿಕೆ.(ಸಂಕೀರ್ಣ)

ತಾಪತ್ರಯ—1 ಆಧ್ಯಾತ್ಮಿಕ, 2 ಆದಿದೈವಿಕ, 3 ಆದಿಭೌತಿಕ. ಕಾರಣ:-1 ಗರ್ಭ, ಜನನ, ಅಜ್ಞಾನ, ಮರಣಾದಿ. 2 ಶೀತೋಷ್ಣವಾಯ್ವಗ್ನಿಜಲಾದಿ. 3 ಖಗ, ಮೃಗ, ನರ ಪಿಶಾಚಿ, ರಾಕ್ಷಸಾದ್ಯುಪದ್ರವ.

ತೃಷ್ಣಾತ್ರಯ—ಕಾಮ, ಭವ, ವಿಭವ. (ಭೌ)

ತಂತ್ರತ್ರಿಕ—1 ಸಿದ್ಧಾಂತ ತಂತ್ರ, ನಾಯಕ ತಂತ್ರ, ಮಾಲಿನೀ ತಂತ್ರ. 2 ಸಾತ್ವಿಕ-ಆಗಮ, ರಾಜಸ-ಯಾಮಲ, ತಾಮಸ-ಡಾಮರ.

ದೀಕ್ಷಾತ್ರಯ—ವೇಧಾದೀಕ್ಷೆ, ಮಂತ್ರದೀಕ್ಷೆ, ಕ್ರಿಯಾದೀಕ್ಷೆ(ಶೈ.)

ದೇಹತ್ರಯ—ಸ್ಥೂಲ, ಸೂಕ್ಷ್ಮ; ಕಾರಣದೇಹ.

ಧರ್ಮಸ್ಕಂದತ್ರಯ—ದಾನಯಜ್ಞಾಧ್ಯಯನ; ತಪ; ಉಪದೇಶ.

ಧಾತ್ವರ್ಥತ್ರಯ—ಸಕರ್ಮಕ. ಅಕರ್ಮಕ; ಪ್ರಯೋಜಕ. ವ್ಯುತ್ಪತ್ತಿ ಪ್ರಕಾರ:-ಸಿದ್ಧ; ವ್ಯುತ್ಪನ್ನ; ಸಮಾಸಧಾತು.(ವ್ಯಾ)

ಪಕ್ಷತ್ರಯ—1 ಶತ್ರು; ಮಿತ್ರ; ಉದಾಸೀನ; 2 ಉಗ್ರ; ಮಂದ; ಸಾಮ್ಯ.

ಪದಾರ್ಥತ್ರಯ—(ಪಾಶುಪತ ದರ್ಶನ) ಪತಿ; ಪಶು (ಜೀವ) ಪಾಶ, ಪಶುಭೇದ:-ವಿಜ್ಞಾನಾಕಲ; ಪ್ರಲಯಾಕಲ, ಸಕಲ. ಪಾಶಭೇದ:-ಮಲ; ಕರ್ಮ; ಮಾಯೆ: ರೋಧಶಕ್ತಿ.

ಪದಾಂಗತ್ರಯ—ಯೋಗ್ಯತೆ; ಆಕಾಂಕ್ಷೆ; ಸನ್ನಿಧಿ.

ಪರಿಚ್ಛೇದತ್ರಯ—ಕಾಲ, ದೇಶ, ವಸ್ತುಭೇದ

ಪಾಶತ್ರಯ—ದರ್ಭಪಾಶ, ಕಾಲಪಾಶ; ವಾರುಣಪಾಶ.

ಪುರುಷತ್ರಯ—ಉತ್ತಮ; ಮಧ್ಯಮ; ಪ್ರಥಮಪುರುಷ.

ಪ್ರತಿಬಂಧಕತ್ರಯ—ಭೂತ ಸಂಪ್ರತಿ- ಆಗಾಮಿ.

ಪ್ರಸ್ಥಾನತ್ರಯ—ನ್ಯಾಯಪ್ರಸ್ಥಾನ;(ಬ್ರಹ್ಮಸೂತ್ರ) ಸ್ಮೃತಿಪ್ರಸ್ಥಾನ(ಗೀತೆ) ಶ್ರುತಿಪ್ರಸ್ಥಾನ (ಉಪನಿಷತ್) ಶಂಕರಮತ.

ಪ್ರಾಣಾಯಾಮವಿಧಿತ್ರಯ—ರೇಚಕ; ಪೂರಕ; ಕುಂಭಕ;

ಪ್ರಾರಬ್ಧತ್ರಯ—ಇಚ್ಛಾ; ಅನಿಚ್ಛಾ; ಪರೇಚ್ಛಾ.

ಪ್ರಪಂಚರೂಪತ್ರಯ—(ಶೈವ)1 ವಿದ್ಯೆ; 2 ಕಲೆ; 3 ಪಶು. ವಿದ್ಯೆ:-ವಿವೇಕಪ್ರವೃತ್ತಿ ಅವಿವೇಕಪ್ರವೃತ್ತಿ. ಕಲೆ:-ಕಾರ್ಯ, ಕಾರಣ. (ಕಾರ್ಯ ಪಂಚತತ್ವ. ಗಂಧಾದಿ ಗುಣ. ಕಾರಣ:-ಜ್ಞಾನ ಕರ್ಮೇಂದ್ರಿಯ ದಶಕ. ಮನೋಬುದ್ಧಿ ಅಹಂಕಾರ)ಪಶು:-ಸಾಂಜನ; ನಿರಂಜನ.

**ಪಿಂಡತ್ರಯ**— ಸಹಜ(ಉದ್ಭಿಜ), ಮಾನವ (ಸಾವಯುವ), ದೇವಪಿಂಡ.
**ಪಿಟಕತ್ರಯ**— ಸೂತ್ರ, ವಿನಯ, ಅಭಿದಮ್ಮ.
**ಭಕ್ತಿತ್ರಯ**— ಗುರು ಭಕ್ತಿ, ಲಿಂಗಭಕ್ತಿ, ಜಂಗಮ ಭಕ್ತಿ, (ಶೈ).
**ಭಕ್ತಿಭೇದತ್ರಯ**— ಲೌಕಿಕ, ವೈದಿಕ, ಆಧ್ಯಾತ್ಮಕ. (ಪ್ರಕಾರ:- **ಕಾಯಿಕ, ವಾಚಿಕ,** ಮಾನಸಿಕ. ಕ್ರಮ:- ಪರಭಕ್ತಿ, ಪರಜ್ಞಾನ, ಪರಮಭಕ್ತಿ.
**ಭಗವತ್‌ಶಕ್ತಿತ್ರಯ**—ಅಂತರಂಗ (ಸಂಧಿನಿ, ಸಂವಿತ್, ಹ್ಲಾದಿನಿ) ಬಹಿರಂಗ, ಸ್ವರೂಪ ಶಕ್ತಿ, (ಮಾಯ-ಪ್ರಕೃತಿ, ತಟಸ್ಥ, (ಜೀವಶಕ್ತಿ)
**ಭಾವತ್ರಯ**— ಜ್ಞಾನವಿಕೃತಿ, ವರ್ತಮಾನವಿಕೃತಿ, ಮೋಹನ ವಿಕೃತಿಭಾವ.
**ಮಲತ್ರಯ**— ಆಣವ, ಕಾರ್ಮಿಕ, ಮಾಯಾ, (ವೀ.ಶೈ.)
**ಮಾತ್ರಾಗಣತ್ರಯ**— 1 ತ್ರಿಮಾತ್ರಾ, ಚತುರ್ಮಾತ್ರಾ, ಪಂಚಮಾತ್ರಾಗಣ. (2 ಬ್ರಹ್ಮ, ವಿಷ್ಣು, ರುದ್ರಗಣ,.
**ಮಹಾವಾತತ್ರಯ**— ಘನೋದಧಿ, ಘನಾನಿಲ, ತನುವಾತ, (ಜೈ.)
**ಮುಕ್ತಿಸಾಧನತ್ರಯ**— ಧ್ಯಾನ, ಭಕ್ತಿ, ತ್ಯಾಗ, (ದ್ವೈತ.)
**ಮೂರ್ತಿತ್ರಯ**— ಬ್ರಹ್ಮ, ವಿಷ್ಣು, ರುದ್ರ. ಸ್ಥಾನ:-ಸತ್ಯ ಲೋಕ, ವೈಕುಂಠ, ಕೈಲಾಸ. **ವಾಹನ:**-ಹಂಸ, ಗರುಡ, ವೃಷಭ. **ಪತ್ನಿಯರು:**-ಶಾರದಾ, ಲಕ್ಷ್ಮೀ, ಉಮಾ, **ಅಧಿಕಾರ:**-ಸೃಷ್ಟಿ, ಸ್ಥಿತಿ, ಲಯ.
**ಮಂಡಲತ್ರಯ**— ಸೂರ್ಯ, ಚಂದ್ರ, ಅಗ್ನಿಮಂಡಲ.
**ಮಂತ್ರಮಲತ್ರಯ**—(1)ಆನದ್ಧ, ಮಾಯಿಕ, ಕಾರ್ಮಿಣ. (2)ಮಾನಸ, ಮಾಯಾ ಭೂತ, ಪಾರುಷ್ಯ.
**ಯಜ್ಞಭೇದತ್ರಯ**— ಪಾಕಯಜ್ಞ, ಹವಿರ್ಯಜ್ಞ, ಸೋಮಯಜ್ಞ, (ಏಳೇಳುವಿಧ.)
**ರಘಟಾತ್ರಯ**—(ಕನ್ನಡ) ಮಂದಾನಿಲ, ಲಲಿತ, ಉತ್ಸಾಹ.
**ರತ್ನತ್ರಯ**—(ಬೌ) ಬುದ್ಧ, ಸಂಘ, ಧರ್ಮ.(ಜೈ.) ಸಮ್ಯಗ್ದರ್ಶನ-ಸಮ್ಯಕ್ಚಾರಿತ್ರ್ಯ, ಸಮ್ಯಗ್ಜ್ಞಾನ.
**ರಾಜತೇಜೋಲಕ್ಷಣ**— ಭಾರ್ಯಾರಕ್ಷಣ, ಕರೆದಾಗಯುದ್ಧಕ್ಕಿದಿರಾಗುವಿಕೆ, ಯುದ್ಧದಲ್ಲಿ ಹಿಮ್ಮೆಟ್ಟದಿರುವಿಕೆ.
**ರೂಪತ್ರಯ**— ಶಿವಪರ:- ಮಹಾಕಾಲ, ತಾರಕೇಶ್ವರ, ಹಾಟಕೇಶ್ವರ, ಸ್ಥಾನ:-ಉಜ್ಜಯಿನಿ ಸ್ವರ್ಗ, ಪಾತಾಳ. ಲಕ್ಷ್ಮೀಸಂಬಂಧ—ಶ್ರೀ (ಲಕ್ಷ್ಮಿಪ್ರದೆ) ಭೂ (ಸಂಪತ್ಪ್ರದೆ) ನೀಲಾ (ಸಸ್ಯಭಾಗ್ಯಪ್ರದೇ.) ಸೀತಾಸಂಬಂಧ— ಇಚ್ಛಾಶಕ್ತಿ, ಕ್ರಿಯಾಶಕ್ತಿ, ಸಾಕ್ಷಾತ್‌ಶಕ್ತಿ, (ಇಚ್ಛಾಶಕ್ತಿ- ಯೋಗಶಕ್ತಿ ಭೋಗಶಕ್ತಿ, ವೀರಶಕ್ತಿ. ಬ್ರಹ್ಮಸಂಬಂಧ-ಭ್ರಾಂತಿ, ವಿದ್ಯಾ, ಪರಾ, (ಲಿಂಗ, ಪು)

**ಲಕ್ಷಣ ದೋಷತ್ರಯ**— ಅವ್ಯಾಪ್ತಿ, ಅತಿವ್ಯಾಪ್ತಿ, ಅಸಂಭವ, **ಲಕ್ಷಣಾ-ವೃತ್ತಿಯ** ಪ್ರಕಾರತ್ರಯ— ಜಹಲ್ಲಕ್ಷಣ, ಅಜಹಲ್ಲಕ್ಷಣ, ಜಹದಜಹಲ್ಲಕ್ಷಣ.

**ಲಿಂಗತ್ರಯ**— ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗ, (**ದೀಕ್ಷೆಸ್ಥಾನ**— ಕ್ರಿಯಾ, ಹಸ್ತ-ಮಂತ್ರ, ಪ್ರಾಣ, ವೇಧಾ, ಆತ್ಮಾ) ಲಿಂಗಗಳುಆರುವಿಧ— ಆಚಾರ, ಗುರು, ಶಿವ,ಅಂತರ ಪ್ರಾಸಾದಿ,ಮಹಾದೇವಲಿಂಗ(ವಿ. ಶೈ.)

**ವಚನತ್ರಯ**— ಏಕವಚನ, ದ್ವಿವಚನ, ಬಹುವಚನ, (ವ್ಯಾ)

**ವರ್ಗತ್ರಯ**— ಕ್ಷಯ,(ಆತ್ಮಾಪಚಯ)ವೃದ್ಧಿ (ಪರಾಪಚಯ)ಸ್ಥಾನ,(ಉಭಯಸಾಮ್ಯ)

**ವಾಕ್ಯಭೇದ**— ಪ್ರಭುವಾಕ್ಯ, (ಶಬ್ದಪ್ರಧಾನ-ವೇದಗಳು,) ಮಿತ್ರವಾಕ್ಯ (**ಅರ್ಥಪ್ರಧಾನ**-ಪುರಾಣೇತಿಹಾಸ)ಪ್ರೇಯಸೀವಾಕ್ಯ (**ರಸಪ್ರಧಾನ**— ಕಾವ್ಯನಾಟಕಾದಿ)

**ವಾಗರ್ಥತ್ರಯ**— (ಪದಭೇದ) ನಾಮ, ಕ್ರಿಯಾ, ಅವ್ಯಯ.(ವ್ಯಾ)

**ವಾನಪ್ರಸ್ಥಭೇದ**— ವೈಖಾನಸ, ವಾಲಖಿಲ್ಯ, ಔದುಂಬರ.

**ವಾಸನಾತ್ರಯ**— ಲೋಕ, ಶಾಸ್ತ್ರ, ವೇದವಾಸನ.

**ವಸ್ತುತತ್ವತ್ರಯ**— 1 ತೈಜಸ, 2 ಜಲ, 3 ಅನ್ನ; ಒಂದೊಂದು, **ಮೂರುಮೂರುವಿಧ** ೧ ಮಧ್ಯಮ, ೨ ಸ್ಥೂಲ, ೩ ಸೂಕ್ಷ್ಮ. **ಪರಿಣಾಮ**— ೧ ತೈಲಘೃತಾದಿ, ಪಿತ್ತಮಜ್ಜಾ ೨ ಪೃಥ್ವಿ, ಸೂರ್ಯಚಂದ್ರಾದಿ, ೩ ವಾಣಿ, ೩ ದ್ರವಪದಾರ್ಥ, ಕಫ, ರಕ್ತ, ೨ ಮೂತ್ರ ೩ ಪ್ರಾಣ, 3 ೧ ಮಾಂಸ, ೨ ಮಲ, ೩ ಮದ.

**ವಿಷ್ಣುಸ್ಥಾನತ್ರಯ**— ಅನಂತಾಸನ, ವೈಕುಂಠ, ಶ್ವೇತದ್ವೀಪ

**ವೀರಮಾಹೇಶ್ವರತ್ರಿವಿಧ**— ಸಾಮಾನ್ಯ, ವಿಶೇಷ, ನಿರಾಭಾರಿ (ಸಂಗತ್ಯಾಗಿ)

**ವೇದಸೂತ್ರತ್ರಯ**— ಶ್ರೌತ, ಸ್ಮಾರ್ತ, ಶುಲ್ಬ.

**ವ್ಯಾಧಿತ್ರಯ**— ದೃಷ್ಟಾಪಚಾರಜನ್ಯ, ಪೂರ್ವಾಪರಾಧಜನಿತ, ಸಂಕರ ಜನಿತ.

**ಶಕ್ತಿತ್ರಯ**— ಉತ್ಸಾಹಶಕ್ತಿ, ಪ್ರಭುಶಕ್ತಿ, ಮಂತ್ರಶಕ್ತಿ.

**ಶಬ್ದಾಲಂಕಾರಭೇದತ್ರಯ**— ಯಮಕ, ಅನುಪ್ರಾಸ, ಚಿತ್ರ.

**ಶಂಕರಸಿದ್ಧಾಂತತ್ರಯ**— ಅದ್ವೈತ, ಮಾಯಾಮಿಥ್ಯತ್ವ, ಕರ್ಮತ್ಯಾಗಾವಶ್ಯಕತೆ,

**ಶ್ರೋತ್ರಿಯಲಕ್ಷಣತ್ರಯ**— ಜನ್ಮ (ಜನ್ಮಬ್ರಾಹ್ಮಣ), ಸಂಸ್ಕಾರ. (ದ್ವಿಜ), ವಿದ್ಯೆ, (ಅಧ್ಯಯನಶೀಲ-ವಿಪ್ರ)

**ಸಾಧನತ್ರಯ**— (ಮೋಕ್ಷದ್ವಾರ) - ವೈರಾಗ್ಯ, ಉತ್ಸಾಹ, ಗುರುಭಕ್ತಿ.

**ಸೂತ್ರತ್ರಯ**— ಸಾಂಖ್ಯ, ಯೋಗ, ಬ್ರಹ್ಮ.

**ಸಂಧಿಕಾರ್ಯತ್ರಯ**— ಲೋಪ, ಆಗಮ, ಆದೇಶ.(ವ್ಯಾ)

**ಸಂಸ್ಕಾರತ್ರಿವಿಧ**— ವೇಗ, ಸ್ಥಿತಿಸ್ಥಾಪಕತ್ವ, ಭಾವನಾ,

**ಸಂಸ್ಕೃತಿಪ್ರಕಾರತ್ರಯ**—ಈಶ್ವರಪ್ರಧಾನ, ಪುರುಷಪ್ರಧಾನ, ನಾರೀಪ್ರಧಾನ.
**ಹಸ್ತರೇಖಾತ್ರಯ**-ಮಾತೃರೇಖೆ, ಪಿತೃರೇಖೆ, ಆಯುರೇಖೆ; ಇವುಗಳಗುಣ:-ಸತ್ವ; ರಜ; ತಮ.ಸ್ವಾಮಿ:-ವಿಷ್ಣು; ಬ್ರಹ್ಮ;ಶಿವ; ಲೋಕ:-ಮೃತ್ಯು, ಊರ್ದ್ವ; ಪಾತಾಳ; ಸಂಜ್ಞೆ:-ಸ್ಥಿರ; ಚರ; ದ್ವಿಸ್ವಭಾವ; ಪ್ರಕೃತಿ. :-ಪಿತ್ತ; ವಾಯು; ಕಫ; ಅವಸ್ಥೆ:-ದಯೆ; ವಾತ್ಸಲ್ಯ; ವೃದ್ಧಾವಸ್ಥೆ; ನದಿ:-ಗಂಗಾ; ಸರಸ್ವತಿ; ಯಮುನಾ.
**ಹೇತ್ವಾಭಾಸತ್ರಿವಿಧ**—ಅಸಿದ್ಧಿ, ಅನೇಕಾಂತಿಕತ್ವ, ಬಾಧಿತತ್ವ, ಅಸಿದ್ಧಿ.(೬ವಿಧ)ಸ್ವರೂಪ, ಸಂಬಂಧ, ವ್ಯತಿರೇಕ, ಅತಿರೇಕ, ವ್ಯಾಪ್ತ್ಯ, (ಕುಮಾರಿಲ).
**ಚತುರವಸ್ಥೆ** – ಬಾಲ್ಯ,ಕೌಮಾರ, ಯವ್ವನ, ವಾರ್ಧಕ್ಯ.
**ಚತುರಂಗಬಲ**— ಹಸ್ತಿ, ಅಶ್ವ, ರಥ, ಪದಾತಿ.
**ಜಾತ್ಯಶ್ವಭೇದ**— ಕಾಂಭೋಜ, ಸಿಂಧು, ಆರಟ್ಟ, ವನಾಯುಜ, (ಇತ್ಯಾದಿ)
**ಚತುರಾಯುಧ** –(ವಿಷ್ಣುವಿಗೆ) ಶಾರ್ಙ (ಧನು),ಸುದರ್ಶನ (ಚಕ್ರ) ,ನಂದಕ,(ಖಡ್ಗ), ಕೌಮೋದಕಿ (ಗದೆ). ಚತುರ್ಭುಜಮಹಾಕಾಳಿಗೆ:-ಖಡ್ಗ, ಖೇಟ, ಮಸ್ತಕ, ಪಾನಪಾತ್ರೆ, ಸರಸ್ವತಿಗೆ:-ವೀಣಾ, ಪುಸ್ತಕ,ಅಂಕುಶ,ಅಕ್ಷಮಾಲಾ.
**ಚತುರಾಶ್ರಮ**—ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ, ಅಂತರ್ಭೇದಗಳು ಬ್ರಹ್ಮಚರ್ಯ:-ಗಾಯತ್ರ, ಬ್ರಾಹ್ಮ, ಪ್ರಾಜಾಪತ್ಯ, ಬ್ರಹ್ಮನ್, (ನೈಷ್ಠಿಕ). ಗೃಹಸ್ಥ:-ವಾರ್ತಾವೃತ್ತಿ, ಶಾಲೀನವೃತ್ತಿ, ಯಾಯಾವರ, ಘೋರಸನ್ಯಾಸಿ. ವಾನಪ್ರಸ್ಥ:-ಔದುಂಬರ ಖೇನಸ, ಸಂಪ್ರಕ್ಷಾಳಿ, ಪೂರ್ಣಿಮಾ ಸನ್ಯಾಸ:-ವೈರಾಗ್ಯ, ಜ್ಞಾನಸನ್ಯಾಸಿ, ಜ್ಞಾನ ವೈರಾಗ್ಯ, ಕರ್ಮಸನ್ಯಾಸ, (ಬ್ರಹ್ಮಚರ್ಯ.)
**ಚತುರಾಸುರಭೇದ** – ದೈತ್ಯ, ದಾನವ, ಅಸುರ, ರಾಕ್ಷಸ.
**ಚತುರುಪಧಾ**—ರಾಜಭಕ್ತಿ, ಅನಾಸಕ್ತಿ, ಧರ್ಮ, ಧೀರತ್ವ.(ಜೈ)
**ಚತುರುಪಾಯ** -- ಸಾಮ, ದಾನ, ಭೇದ, ದಂಡ ಸಾಮ(೫ವಿಧ):-ಅನುಕೂಲವರ್ತನ, ಉಪಕಾರಚಿಂತನ, ಬಂಧುತ್ವಪ್ರದರ್ಶನ, ಸೌಜನ್ಯಪ್ರಕಟನ, ಗುಣಕೀರ್ತನ. ದಾನ:-(೫ವಿಧ) ದ್ರವ್ಯಾರ್ಪಣ, ವಸ್ತುಸಮರ್ಪಣ,(ಕೊಟ್ಟುದಕ್ಕಾಗಿ)ಆತ್ಮಾನಂದ, ದ್ರವ್ಯಪ್ರವರ್ತನ, ಋಣಮೋಚನ. ಭೇದ:-(ತ್ರಿವಿಧ) ಹಗೆಗಳಲ್ಲಿಭೇದಹುಟ್ಟಿಸುವುದು, ಸಂಘಟ್ಟನ, ಸಂತರ್ಜನ. ದಂಡ:- ಬಾಧಿಸುವಿಕೆ, ದ್ರವ್ಯಾಪಹಾರ, ನಿಗ್ರಹಿಸುವಿಕೆ.
**ಚತುರ್ಗತಿ** (ಜೈನ)—1 ದೇವ, 2 ಮಾನವ, 3 ತಿರ್ಯಕ್, 4 ನಾರಕ. 1 ಚತುರ್ವಿಧ:-ಭವನಾಮರ, ಜ್ಯೋತಿರಮರ, ವ್ಯಂತರಾಮರ, ಕಲ್ಪಾಮರ. ಭವನಾಮರ:-ಅಸುರ ನಾಗಾದಿದಶವಿಧ.ಜ್ಯೋತಿರಮರ-ಚಂದ್ರ, ತಾರಾ, ಗ್ರಹ, ನಕ್ಷತ್ರಭೇದ. ವ್ಯಂತರಾಮರ ಕಿನ್ನರ, ಕಿಂಪುರುಷ, ಗರುಡ, ಗಂಧರ್ವ, ಯಕ್ಷ, ರಾಕ್ಷಸ, ಭೂತ, ಪಿಶಾಚ ಭೇದ.

ಕಲ್ಪಾಮರ— ಇಂದ್ರ, ಪ್ರತಿಇಂದ್ರಾದಿ, (ನವವಿಧ). ಮಾನವ:-ಭೋಗಭೂಚರ, ಭೂಚರ, ಖೇಚರ.

**ಚತುರ್ದಿಕ್ಕು**— ಪೂರ್ವ(ಪ್ರಾಚಿ),ಪಶ್ಚಿಮ(ಅವಾಚಿ,)ದಕ್ಷಿಣ(ಪ್ರತೀಚಿ),ಉತ್ತರ(ಉದೀಚಿ)

**ಚತುರ್ಭಾಷಾ**— ಸಂಸ್ಕೃತ, ಪ್ರಾಕೃತ, ಅಪಭ್ರಂಶ, ಪೈಶಾಚಿಕ.

**ಚತುರ್ಯಾನ**—ಸ್ಯಂದನ (ಪುಷ್ಕರಥಾದಿ), ಶಕಟ, ಶಿಬಿಕ, ದೋಲ (ಉಯ್ಯಾಲೆ).

**ಚತುರ್ಯುಗ**— ಕೃತ, ತ್ರೇತೆ, ದ್ವಾಪರ, ಕಲಿ,

**ಚತುರ್ವರ್ಗ**—(ಪುರುಷಾರ್ಥಚತುಷ್ಟಯ), ಧರ್ಮ, ಅರ್ಥ, ಕಾಮ, ಮೋಕ್ಷ,. ಇವುಗಳಾಕಾರ:-ವೃಷಭ, ಸಿಂಹ, ಭೂತ, ಹಸ್ತಿ. ಬಣ್ಣ:-ರಕ್ತ, ಶ್ಯಾಮಲ, ಪೀತ, ನೀಲ

**ಚತುರ್ವರ್ಣ**— ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರ.

**ಚತುರ್ವ್ಯಸನ**— ದ್ಯೂತ, ಮೃಗಯೆ, ಮದ್ಯಪಾನ, ಅತ್ಯಧಿಕ ಸ್ತ್ರೀಸಂಗ, (ಇವುರಾಜರಿಗೆ ಅನಿಷ್ಟಪ್ರದ)

**ಚತುರ್ವಿದ್ಯೆ**— ಅನ್ವೀಕ್ಷಿಕಿ (ನ್ಯಾಯ), ತ್ರಯಿಾ (ವೇದತ್ರಯ), ವಾರ್ತೆ (ಲೋಕಾಚಾರ, ಪುರಾಣಾದಿ), ದಂಡನೀತಿ,

**ಚತುರ್ವಿಧಅನಾದಿಯಜ್ಞ**— 1 ಲೋಕಯಜ್ಞ; 2 ಕ್ರಿಯಾಯಜ್ಞ, 3 ಸನಾತನಗೃಹ್ಯಯಜ್ಞ, 4 ಪಂಚಭೂತಯಜ್ಞ.

**ಚತುರ್ವಿಧಅನ್ವಯಸಾಧನ**—ಪದಪರ್ಯಾಯ, ಪದಸಮುಚ್ಚಯ, ಪದಸಮಭಿಹಾರ, ಪದಸಮುಚ್ಚಯ ಕಾನ್ವಯ (ನ್ಯಾ).

**ಚತುರ್ವಿಧಆಯ**—ಧ್ವಜಾಯ, ಸಿಂಹ, ವೃಷಭ, ಗಜಾಯ.

,, **ಕಾರ್ಯ**—ವೃತ್ತಿ, ಪರಿಣಾಮ, ಆರಂಭ, ವಿವರ್ತ.

,, **ಚಿದ್ಭೇದ**—ಜೀವ, ಈಶ್ವರ, ತಟಸ್ಥ, ಬ್ರಹ್ಮ.

,, **ಜ್ಞಾನ**—ಕೃತ್ಯಾಕೃತ್ಯವಿವೇಕ, ಪರಲೋಕ ಚಿಂತನ,ವಿಷ್ಣುಪ್ರಾಪ್ತಿ ಸಾಧನಜ್ಞಾನ,ವಿಷ್ಣುರೂಪಜ್ಞಾನ.

**ಚತುರ್ವಿಧದತ್ತಿ**— ದಯಾದತ್ತಿ, ಸಮದತ್ತಿ, ಪಾತ್ರದತ್ತಿ, ಸಕಳದತ್ತಿ, (ಜೈ.)

**ಚತುರ್ವಿಧದಾನ**— ಆಹಾರಾಭಯ, ಭೈಷಜ್ಯಶಾಸ್ತ್ರಭೇದ, (ಜೈ.)

,, **ಮಾರ್ಗ**— ಧ್ರುವ(ಲೋಕೋಪಯೋಗಿ),ತ್ರಿಕ(ನಿತ್ಯದಾನ),ಕಾಮ್ಯ ನೈಮಿತ್ತಿಕ, ಕಾಲ, (ಕ್ರಿಯಾ, ಗುಣಾಪೇಕ್ಷ).

**ಚತುರ್ವಿಧದಿವ್ಯಪಿತೃವರ್ಗ**—ಅಗ್ನಿಷ್ವಾತ್ತ್, ಬರ್ಹಿಷದ, ಆಜ್ಯಪ, ಸೋಮಪ.

**ಚತುರ್ವಿಧದುಃಖಕಾರಣ**— ರೋಗ, ಅತಿಶ್ರಮ, ದುಃಖದಾಯಿ ವಸ್ತುಸ್ಪರ್ಶನ, ಇಚ್ಛಾವಸ್ತುದೊರಕದಿರುವಿಕೆ.

**ಚತುರ್ವಿಧದೋಷ**— ಸಾಹಜಿಕ, ಸಾಂಸರ್ಗಿಕ, ಕರ್ಮಕೃತ, ಕಾಲಕೃತ;

**ಚತುರ್ವಿಧನಾಯಕರು**— ಧೀರೋದಾತ್ತ, ಧೀರೋದ್ಧತ, ಧೀರಶಾಂತ, ಧೀರಲಲಿತ, ಭೋಗಸಖರು:- ವಿಟ, ವಿದೂಷಕ, ಪೀಠಮರ್ದ, ನಾಗರಿಕ.

**ಚತುರ್ವಿಧತಾಮಸಗುಣ**— ಅಧರ್ಮ, ಅಜ್ಞಾನ, ಅಭಿಮಾನ, ಅಶಕ್ತಿ.

,, **ತೇಜಸ್**— ಭೌಮ, ಆಕರಜ, ದಿವ್ಯ, ಔದಾರ್ಯ. ರೂಪಗಳು:- ದೀಪಾದಿ, ಸ್ವರ್ಣಾದಿ, ಸೂರ್ಯಾದಿ, ಜಠರಾಗ್ನಿ. ಇಂಧನಗಳು:-ಪಾರ್ಥಿವವಸ್ತು, ಇಲ್ಲ, ಜಲ, ಪಾರ್ಥಿವಜಲ.

**ಚತುರ್ವಿಧಪುರುಷಜಾತಿ**— ಶಶಕ, ಮೃಗ, ಅಶ್ವ, ಹಸ್ತಿ. ಸ್ತ್ರೀಜಾತಿ:-ಪದ್ಮಿನಿ, ಚಿತ್ರಿನಿ, ಶಂಖಿನಿ, ಹಸ್ತಿನಿ.

**ಚತುರ್ವಿಧಪುರಾಣಭೇದ**— ಪುರಾಣ, ಮಹಾಪುರಾಣ, ಉಪಪುರಾಣ, ಅತಿಪುರಾಣ.

,, **ಪುರಾಣವಿಷಯಾಂಗಗಳು**:-ಆಖ್ಯಾನ- ಉಪಾಖ್ಯಾನ, ಗಾಥಾ, ಕಲ್ಪಶುದ್ಧಿ.

**ಚತುರ್ವಿಧಬೌದ್ಧತತ್ವ**— ದುಃಖ, ಸಮುದಾಯ,(ದುಃಖಾತಿಕ್ರಮ) ನಿರೋಧ. ಮಾರ್ಗ:- (ದುಃಖೋಪಶಮ), ಸಮುದಾಯ:-ಪ್ರತ್ಯಯೋಪನಿಬಂಧ, ಹೇತುಸಂಬಂಧ.

**ಚತುರ್ವಿಧಮಾಸಭೇದ**— ಸೌರ, ಚಾಂದ್ರ, ನಾಕ್ಷತ್ರ, ಸಾವನ.

,, **ಮೋಕ್ಷ**— ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ,

,, **ಮೋಕ್ಷೋಪಾಯ**— ಚರ್ಯಾ, ಕ್ರಿಯಾ, ಜ್ಞಾನ, ಯೋಗ. (ಶೈ)

,, **ಮೋಹ**— ಲಜ್ಜಾಮೋಹ, ವಿಭವಮೋಹ, ಕರುಣಮೋಹ, ಸಹಜಮೋಹ.

,, **ಯಥಾರ್ಥಜ್ಞಾನ**— ಈಶಜ್ಞಾನ, ಲಕ್ಷ್ಮೀಜ್ಞಾನ, ಯೋಗಿಜ್ಞಾನ, ಅಯೋಗಿ ಜ್ಞಾನ.

**ಚತುರ್ವಿಧಯೋಗಮಾರ್ಗ**— ಮಂತ್ರಯೋಗ, ಹಠಯೋಗ, ಲಯಯೋಗ, ರಾಜ ಯೋಗ. ಯೋಗಧ್ಯಾನಭೇದ:-ಸ್ಥೂಲಧ್ಯಾನ, ಜ್ಯೋತಿರ್ಧ್ಯಾನ, ಬಿಂದುಧ್ಯಾನ, ನಿರ್ಗು ಣಧ್ಯಾನ.

**ಚತುರ್ವಿಧರಾಗಭೇದ**— ರಾಗಾಂಗ, ಬಾಹ್ಯಾಂಗ, ಕ್ರಿಯಾಂಗ, ಉಪಾಂಗ. (101 ರಾಗ ಭೇದಗಳು.)

**ಚತುರ್ವಿಧಪ್ರಲಯ**— ನಿತ್ಯ, ನೈಮಿತ್ತಿಕ, ಪ್ರಾಕೃತಿಕ, ಆತ್ಯಂತಿಕ.

,, **ವಾದ್ಯ**— ತತ, ಸುಷಿರ, ಅವನದ್ಧ, ಘನ.

,, **ವಂಶೀಪ್ರಭೇದ**— ನಂದ, ಮಹಾನಂದ, ಜಯ, ವಿಜಯ.

,, **ವಿದ್ಯುತ್**— ಕಪಿಲ, ಅತಿಲೋಹಿತ, ಪೀತ, ಶ್ವೇತವಿದ್ಯುತ್.

,, **ವಿಪ್ರಲಂಭ**- (ಶೃಂಗಾರ)ಪೂರ್ವಾನುರಾಗ, ಮಾನಾಖ್ಯ, ಪ್ರವಾಸ, ಕರುಣಾತ್ಮಕ

,, **ಶೈವದರ್ಶನ**— ನಕುಲೀಶಪಾಶುಪತ, ಶೈವ, ಪ್ರತ್ಯಭಿಜ್ಞಾನ, ರಸೇಶ್ವರ.

,, **ಶೃಂಗಾರನಾಯಕರು**— ಅನುಕೂಲ, ದಕ್ಷಿಣ, ಧೃಷ್ಟ, ಶಠ.

,, **ಸಂಬಂಧ**— ಪ್ರಕೃತಿಪ್ರತ್ಯಯ ಸಂಬಂಧ, ವಿಶೇಷಣವಿಶೇಷ್ಯ ಸಂಬಂಧ, ಕರ್ತೃ ಕರ್ಮಕ್ರಿಯಾ ಸಂಬಂಧ, ಲಕ್ಷ್ಯಲಕ್ಷಣ ಸಂಬಂಧ, (ವ್ಯಾ)

**ಚತುರ್ವಿಧಾನಂದ**— ಚಿತ್ತವಿಕಾಸ, ವಿಸ್ತಾರ, ಕ್ಷೋಭ, ವಿಕ್ಷೇಪ,

,, **ಭಿನಯ**— (ನೃತ್ಯಕ್ರಿಯಾದಿಭೇದ) ಆಂಗಿಕ, ಸಾತ್ವಿಕ, ವಾಚಿಕ, (ವ್ಯಂಜಕ) ಆಹಾರ್ಯಕ.

**ಚತುರ್ವಿಧಾಲಂಕಾರ**-(ಅರ್ಥಾಲಂಕಾರಭೇದ)ವಾಸ್ತವ, ಔಪಮ್ಯ, ಶ್ಲೇಷ, ಅತಿಶಯೋಕ್ತಿ

,, **ಅವಸ್ಥೆ**— ಜಾಗ್ರತ್, ಸ್ವಪ್ನ, ಸುಷುಪ್ತಿ, ತುರೀಯ. (ಈ ಅವಸ್ಥೆಯಲ್ಲಿದ್ದಾತ್ಮ ರೂಪ:-ವಿಶ್ವ, ತೇಜಸ, ಪ್ರಾಜ್ಞ, ತಟಸ್ಥ)

**ಚತುರ್ವೇದ**— 1 ಋಕ್, 2 ಯಜು, 3 ಸಾಮ, 4 ಅಥರ್ವ. ಉಪವೇದಚತುಷ್ಟಯ:- 1 ಆಯುರ್ವೇದ, 2 ಧನುರ್ವೇದ 3 ಗಾಂಧರ್ವವೇದ 4 ಅರ್ಥವೇದ. ವೇದವಿಭಾಗ ಗಳು:-ಮಂತ್ರ, ಸಂಹಿತಾ, ಆರಣ್ಯಕ, ಸೂತ್ರ, ಅನುಕ್ರಮಣಿಕೆ.

**ಚತುರ್ವ್ಯೂಹ**— ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ.

,, **ಶರೀರ**— ಸ್ಥೂಲ, ಸೂಕ್ಷ್ಮ, ಕಾರಣ, ಸಾಕ್ಷೀರೂಪ.

,, **ಶಾಸ್ತ್ರ**— ಶಬ್ದ, ತರ್ಕ, ಮೀಮಾಂಸ, ಧರ್ಮಶಾಸ್ತ್ರ.

,, **ಕರ್ಮ**— ಏಕಾಂತವಾಸ, ಭಿಕ್ಷಾ, ಧ್ಯಾನ, ಶೌಚ. (ಸನ್ಯಾಸಕ. ಚೌ)

,, **ಪ್ರಕಾರಭೇದ**— (ಕಾಯಿಕ)ಪರದ್ರವ್ಯಾಪಹಾರ, ಮಿಥ್ಯಾಭೋಗ, ಹಿಂಸೆ, ಅಭಕ್ಷ್ಯ ಭಕ್ಷಣ, (ವಾಚಿಕ)ಪರನಿಂದೆ, ಅಪ್ರಿಯ ಹಾಗೂ ಅಪ್ರಾಸಂಗಿಕಭಾಷಣ, ಮಿಥ್ಯೋಕ್ತಿ. (ಮಾನಸಿಕ)ಅನಿಷ್ಟಚಿಂತನ, ದುರಾಗ್ರಹ, ಪರಸ್ತ್ರೀವ್ಯಸನ, ಪರಸ್ವಾಪಹಾರಬುದ್ಧಿ.

**ಚತುಷ್ಪರಿಮಾಣಭೇದ**— ಅಣು, ಮಹತ್, ಹ್ರಸ್ವ, ದೀರ್ಘ.

,, **ತೀರ್ಥ**— ಪುಷ್ಕರ(ಕೃತಯುಗ), ನೈಮಿಷ (ತ್ರೇತ), ಕುರುಕ್ಷೇತ್ರ (ದ್ವಾಪರ), ಗಂಗಾ (ಕಲ್ಕಿ)

**ಚತುಸ್ಸಂಧ್ಯಕ್ಷರ**— ಏಕಾರ, ಐಕಾರ, ಓಕಾರ, ಔಕಾರ. (ವ್ಯಾ)

**ಚಾತುರ್ಹೋತ್ರ**— (ಋತ್ವಿಜ). ಹೋತೃ, ಅಧ್ವರ್ಯು, ಉದ್ಗಾತೃ, ಬ್ರಹ್ಮ.

**ಅನುಯೋಗಚತುಷ್ಟಯ**— (ಜೈನ) ಪ್ರಥಮಾನುಯೋಗ, (ಸತ್ಪುರುಷರಚಾರಿತ್ರ್ಯಾದಿ), ಕರಣಾನುಯೋಗ (ಲೋಕಾಲೋಕಗತಿನಿರೂಪಣ) ಚರಣಾನುಯೋಗ (ಯತಿಗಾರ್ಹಸ್ಥ್ಯನೀತಿ),ದ್ರವ್ಯಾನುಯೋಗ(ಜೀವಾದಿತತ್ವನಿರ್ದೇಶನ).

**ಅಜಡಪದಾರ್ಥಭೇದ**— ಶುದ್ಧತತ್ವ, ಧರ್ಮಭೂತಜ್ಞಾನ, ಜೀವ, ಈಶ್ವರತತ್ವ.

**ಅಭಾವಭೇದ**— ಪ್ರಾಗಭಾವ, ಪ್ರಧ್ವಂಸ, ಅನ್ಯೋನ್ಯ, ಅತ್ಯಂತಾಭಾವ.

**ಅರ್ಥಧರ್ಮಪ್ರಕಾರ**— ದ್ರವ್ಯಸಂಗ್ರಹ, ವರ್ಧನ, ಸಂರಕ್ಷಣ, ಪಾತ್ರವಿನಿಯೋಗ, (ರಾಜಧರ್ಮವಿದು)

ಅನಂತಚತುಷ್ಟಯ— ಅನಂತಜ್ಞಾನ, ಅನಂತವೀರ್ಯ, ಅನಂತದರ್ಶನ, ಅನಂತ ಸುಖ.
ಅಂತಸ್ಥಾಕ್ಷರಚತುಷ್ಟಯ:-ಯ, ರ, ಲ, ವಕಾರಗಳು.
ಅಂತಃಕರಣಚತುಷ್ಟಯ— ಮನ, ಬುದ್ಧಿ, ಚಿತ್ತ, ಅಹಂಕಾರ.
ಆತ್ಮೋದಾತ್ತಗುಣಭೇದ— (ಸಾಹಜಿಕ)ಅನಂತಜ್ಞಾನ, ಅನಂತದರ್ಶನ, ಅನಂತಸುಖ, ಅನಂತಶಕ್ತಿ.(ಜೈ)
ಆರ್ಯಸತ್ಯಪ್ರಕಾರಗಳು— ದುಃಖಸಮುದಯ, ದುಃಖಾತಿಕ್ರಮ, ದುಃಖನಿರೋಧ, ದುಃಖೋಪಶಮ.

ಈಶ್ವರಾನುಗ್ರಹದ್ವಾರಗಳು— ದಯೆ, ದಾಕ್ಷಿಣ್ಯ, ಕ್ಷಮೆ, ಶ್ರದ್ಧೆ.
ಉತ್ಸಾಹಗುಣವಿಭೇದಗಳು— ಶೌರ್ಯ, ಅಮರ್ಷ, ಶೀಘ್ರತೆ, ಸಾಮರ್ಥ್ಯ.(ದಕ್ಷತೆ)
ಋತ್ವಿಜಗಣಚತುಷ್ಟಯ— ಪ್ರಶಸ್ತಾ, ಪ್ರತಿಪ್ರಸ್ಥಾನ, ಬ್ರಾಹ್ಮಣಾಚ್ಛಾಂಸಿ, ಪ್ರಸ್ತೋತಾ.
ಕರ್ಮಪ್ರಮಾದಭೇದ— ಶಾಸ್ತ್ರೋಲ್ಲಂಘನ, ಸಾಧನವೈಕಲ್ಯ, ಮಹದತಿಕ್ರಮ್ಯ, ಸ್ವವೃತ್ತಿ ವಿರೋಧ,
ಕೃಷ್ಣನರಥ(ಹಯ)ಚತುಷ್ಟಯ— ಶೈಬ, ಮೇಘಪುಷ್ಪ, ಸುಗ್ರೀವ, ಬಲಾಹಕ.
ಕಾವ್ಯದಚತುರ್ವೃತ್ತಿ—ಭಾರತಿ, ಸಾತ್ವಕಿ, ಆರಭಟಿ, ಕೈಶೀಕೀ,
ಕ್ರೀಡಾಪದ್ಧತಿಯಚತುರ್ಭೇದ— ಆತ್ಮವಿನೋದಾರ್ಥ, ಪ್ರೇಕ್ಷಣಾನಂದಾರ್ಥ, ಧರ್ಮೋತ್ಸವಪ್ರಧಾನ, ಸಮ್ಮಿಶ್ರಣರೂಪ.
ಜ್ಯೋತಿರ್ವಿಧಚತುಷ್ಟಯ—ಭಾಸ್ಕರಾಚಾರ್ಯ, ಕಮಲಾಕರ, ಬ್ರಹ್ಮಗುಪ್ತ, ಆರ್ಯಭಟ್ಟ.
ಜ್ಞಾನಚತುರ್ವಿಧಫಲಪ್ರಾಪ್ತಿ— ದುಃಖಾಪಸರ್ಪ, ಕಾಮಾಪ್ತಿ, ಕೃತಾರ್ಥತ್ವ, ಪ್ರಾಪ್ಯಪ್ರಾಪ್ತಿ.
ತೀರ್ಥವಿಶೇಷ— ಚತುರ್ಭೇದ:-ದೈವ (ಗಂಗಾದಿ), ಅಸುರ (ಗಯಾ ಇತ್ಯಾದಿ), ಆರ್ಷ (ಪ್ರಭಾಸಾದಿ), ಮಾನುಷ (ಕುರು ಇತ್ಯಾದಿ).
ದಾರ್ಶನಿಕಚತುಸ್ಸಿದ್ಧಾಂತ— (ದರ್ಶನಭೇದ) ವೈಭಾಷಿಕ, ಸೌತ್ರಾಂತಿಕ, ಯೋಗಾಚಾರ, ಮಾಧ್ಯಮಿಕ. (ಬೌ).
ದುರ್ಗಚತುರ್ಭೇದ— ನಾದೇಯ, ಪಾರ್ವತ, ವನ್ಯ, ಕೃತ್ರಿಮ.
ಧರ್ಮತತ್ವವಿಭೇದ— ಶ್ರುತಿ, ಸ್ಮೃತಿ, ಶಿಷ್ಟಾಚಾರ, ಮನಃಶುದ್ಧಿ.
ನಿತ್ಯತತ್ವಚತುಷ್ಟಯ— ಈಶ್ವರ, ಜೀವ, ಕಾಲ, ಪ್ರಕೃತಿ (ಚೈತನ್ಯ).
ಪಾದಚತುಷ್ಟಯ— (1) ಬ್ರಹ್ಮವಿದ್ಯಾ:-ವಿದ್ಯೆ, ಅವಿದ್ಯೆ, ಆನಂದ, ತುರೀಯಪಾದ. (ವೇದಾಂತ) (1) ಸರಸ್ವತೀಪರ:-(ವಾಗ್ರೂಪಗಳು) ಪರಾ, ಪಶ್ಯಂತಿ, ಮಧ್ಯಮಾ, ವೈಖರಿ, ಸ್ಥಾನ:-ಮೂಲಾಧಾರ, ನಾಭಿ, ಹೃತ್, ಕಂಠ. (3)ಧರ್ಮಪರ:-ಸತ್ಯ, ತಪ, ದಯಾ, ಶೌಚ.
ಪುಣ್ಯನದೀಚತುಷ್ಟಯ—(ವೇದಪ್ರಧಾನ):- ಗಂಗಾ (ಋಕ್), ಯಮುನ (ಯಜು),

ನರ್ಮದಾ- (ಸಾಮ), ಸರಸ್ವತಿ (ಅಥರ್ವ),ಸ್ಕಂಧ ಪು.

**ಪೀಠಚತುಷ್ಟಯ**—(ಶಾಂಕರ):-ಶ್ರೀಮಠ (ಬದರಿ) ಹಿಮಾಲಯ,ಗೋವರ್ಧನ (ಶಂಕರ, ಪುರುಷೋತ್ತಮ), ಕಾಳಿಕಾಮಠ (ದ್ವಾರಕಾ), ಶಾರದಾ ಪೀಠ(ಶೃಂಗೇರಿ).ದೇವರು:- ನಾರಾಯಣ, ಜಗನ್ನಾಥ, ಸಿದ್ಧೇಶ್ವರ, ವಾರಾಹ. ಶಕ್ತಿ:-ಪೂರ್ಣಗಿರಿ, ವಿಮಲಾಂಬೆ, ಭದ್ರಕಾಳಿ, ಶಾರದೆ. ವೇದ:-ಅಥರ್ವ, ಋಕ್, ಸಾಮ, ಯಜು.

**ಪುದ್ಗಲ ಚತುಷ್ಟಯ**—ವಾಯು,ತೇಜ, ಪೃಥ್ವಿ, ಜಲ.

**ಪ್ರಕಾರಚತುರ್ಭೇದ**—ಏಕದೇಶತ್ವ, ಆವರಣ, ಸಂಸರ್ಗ, ಸಂಬಂಧ

**ಪ್ರಯೋಗಗಳುಚತುರ್ವಿಧ**—ಕರ್ತರಿ, ಕರ್ಮಣಿ, ಭಾವಿ, ಆತ್ಮನೇಪದಪ್ರಯೋಗ.(ನ್ಯಾ

**ಪ್ರಾಸಗಳು ಚತುರ್ವಿಧ**—ದ್ವಿಪ್ರಾಸ, ದ್ವಂದ್ವಪ್ರಾಸ, ತ್ರಿಪ್ರಾಸ, ಅದ್ಯಂತಪ್ರಾಸ. (ಛಂ)

**ಬ್ರಹ್ಮನಚತುಃಸ್ವರೂಪಗಳು**—1 ಓತ, ಅನುಜ್ಞಾತ, ಅನುಜ್ಞಾ, ಅವಿಕಲ್ಪ. 2 ಸ್ಥೂಲ, ಸೂಕ್ಷ್ಮ, ಬೀಜ, ಸಾಕ್ಷಿ ರೂಪ(ನೃಸಿಂಹ -ಉ.)

**ಭಗವತ್‌ವಿಲಯಕಾರಕವಿಭೂತಿಗಳು**—ರುದ್ರ, ಕಾಲ, ಅಂತಕ, ಫಲಿತಜೀವ.

**ಭೋಜನಚತುರ್ವಿಧ**—ಭಕ್ಷ್ಯ, ಭೋಜ್ಯ ಚೋಷ್ಯ, ಲೇಹ್ಯ.

**ಮಹಾರಾಜರ ಚತುರ್ವಿಧ ಪತ್ನಿಯರು**—ಮಹಿಷಿ, ಪರಿವೃಕ್ತಿ, ವಾವಾತಾ ಪಾಲಾಕಲಿ.

**ಮುಕ್ತಿಯಚತುರ್ವಿಧಲಕ್ಷಣ**-ಭೂತದಯೆ,ಶಿವಭಕ್ತಿ,ಶಿವದರ್ಶನ,ಲಿಂಗದರ್ಶನ(ವಿ.ಶೈ)

**ಯಕ್ಷಕರ್ದಮದ್ರವ್ಯಚತುಷ್ಟಯ**—ಅಗರು, ಕರ್ಪೂರ, ಕಸ್ತೂರಿ, ತಕ್ಕೋಲ.

**ಯೋಗಚತುಷ್ಟಯ**—ರಾಜಯೋಗ, ಸೌಭಾಗ್ಯಯೋಗ, ವೈಧವ್ಯಯೋಗ, ಸಾಹಚರ್ಯ ಯೋಗ, (ಜ್ಯೋ)

ವೀರಶೈವಾಚಾರ್ಯರು:-ರೇವಣಸಿದ್ಧ, ಮರುಳಸಿದ್ದೇಶ, ಏಕೋರಾಮಿ, ಪಂಡಿತಾರಾಧ್ಯ.

**ವೇದಸುರಭೀಸ್ತನಚತುಷ್ಟಯ**—ಸ್ವಾಹಾ, ಸ್ವಧಾ, ವಷಟ್ಕಾರ, ಹಂತಕಾರ. (ದೇವ, ಪಿತೃ, ದೇವ-ಋಷಿ, ಮನುಷ್ಯಾಧಾರ)

**ವೇದೋಪಾಂಗಚತುಷ್ಟಯ**—ನ್ಯಾಯ, ಮೀಮಾಂಸ, ಸ್ಮೃತಿ, ಪುರಾಣ.

**ವೇದಾಂಗಚತುಷ್ಟಯ**—(ವಿಭಾಗಗಳು):-ಬ್ರಾಹ್ಮಣ, ಸಂಹಿತೆ, ಆರಣ್ಯಕ, ಉಪನಿಷತ್.

**ವೈಷ್ಣವಸಾಂಪ್ರದಾಯವಿಶೇಷಗಳು** ಶ್ರೀ, ಬ್ರಹ್ಮ, ರುದ್ರ, ಸನಕಸಾಂಪ್ರದಾಯ.

**ಶಿಕ್ಷಣಚತುರ್ವಿಭೇದ**—(1)ಶಾರೀರಕ, ಮಾನಸಿಕ; ವ್ಯಾವಹಾರಿಕ, ನೈತಿಕ, (2)ಅರ್ಥ ವಿದ್ಯಾದಿ, ವೇದ ವೇದಾಂಗಾದಿ, ಕೃಷಿವಾಣಿಜ್ಯಾದಿ, ಪೌರನೀತಿ.

**ಶಿಕ್ಷಾವ್ರತಚತುಷ್ಟಯ**— ಸರ್ವಸಮಭಾವತ್ವ, ಜಿನಸ್ತವನ- ಪೂಜೆ,ದಾನೋಪವಾಸ ವ್ರತಾಚರಣೆ, ಸನ್ಯಾಸಾಚರಣೆ, (ಜೈ.)

**ಷಣ್ಮಾತರಚತುಸ್ವರೂಪ**—ಶಾಖ, ವಿಶಾಖ, ಸ್ಕಂಧ, ನೈಗಮೇಶ

**ಶ್ರಾವಕ ಚತುರ್ವಿಧ ಧರ್ಮ**— ದಾನ, ಪೂಜೆ, ಶೀಲ, ಉಪವಾಸ. (ಜೈ)

**ಶೈವಶಾಖಾಭೇದ**—ಶೈವ, ಪಾಶುಪತ, ಕಾಪಾಲಿಕ, ಕಾರುಣಿಕ.

**ಸನ್ಯಾಸೀಕುಲ ಚತುರ್ಭೇದ**— 1 ಕುಟೀಚಕ, ಬಹೂದಕ, ಹಂಸ, ಪರಮಹಂಸ.
2 ಊರ್ಧ್ವಶೀತಾ, ಊರ್ಧ್ವಪುಂಡ್ರ, ಊರ್ಧ್ವದಂಡ, ಊರ್ಧ್ವಯೋಗ.

**ಸಾಧನಚತುಷ್ಟಯ**—(ಆತ್ಮತತ್ವ) ದರ್ಶನ, ಶ್ರವಣ, ಮನನ, ನಿಧಿಧ್ಯಾಸನ. ವೀ. ಶೈ.- ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಲಿಂಗಾಂಗಸಾಮರಸ್ಯ. ವೇದಾಂತಸಿದ್ಧಾಂತ:- ಸದಸದ್ವಿವೇಕ, ವಿಷಯವೈರಾಗ್ಯ, ಶಮದಮಾದಿಷಟ್ಸಂಪತ್ತಿ, ಮುಮುಕ್ಷುತಾ. ಅಭಯ ಪ್ರಧಾನ:-ಅಗ್ನಿಹೋತ್ರ, ಮೌನ, ವೇದಾಧ್ಯಯನ, ಯಜ್ಞ.

**ಸೇನಾಚತುಷ್ಟಯ**—ಮಿತ್ರಬಲ (ಮಿತ್ರರಾಜಕ ಸೈನ್ಯ), ಆಟವಿಕಬಲ (ವನ್ಯಜಾತಿಗಳ ಬಲ), ಭೃತ್ಯಬಲ (ವೈತಾನಿಕ), ಮೂಲಬಲ. (ಪರಂಪರಾಗತಸೈನ್ಯ),

**ಸೋಮರಸಾಯತ್ತಸಾಧನ**:-ಅನ್ನ, ಔಷಧಿ, ಸುಧಾ, ಚಂದ್ರಮಂಡಲ.

**ಸಂಧ್ಯಂಗಗಳು**—(ಸಂಹಿತಾ ಭಾಗ) ಪೂರ್ವಭಾಗ, ಉತ್ತರರೂಪ, ಸಂಧಿ, ಸಂಧಾನ (ಸಂಯೋಜಕ)

**ಪಂಚಕಜ್ಜಾಯ**— ಅವಲಕ್ಕಿ, ಬೆಲ್ಲ, ಕಾಯಿ, ತುಪ್ಪ, ಎಳ್ಳು, (ಈಐದರಿಂದಾದುದು).

**ಪಂಚಕನ್ಯಾ**—ಅಹಲ್ಯಾ, ದ್ರೌಪದೀ, ಸೀತಾ, ತಾರಾ, ಮಂಡೋದರಿ.

**ಪಂಚಕಲಾಶಕ್ತಿ**— ಪರಮಶಾಂತಿ, ಅತೀತಶಾಂತಿ, ವಿದ್ಯೆ ಪ್ರತಿಷ್ಠೆ, ನಿವೃತ್ತಿ (ಚ-ಪು)

**ಪಂಚಕಲಾಸಂಜ್ಞಾ**— (ಸಾದಾಖ್ಯ) ಪರ, ಗೂಢ, ಶರೀರಸ್ಥ, ಲಿಂಗಕ್ಷೇತ್ರ, ಅನಾದಿ:- (ಈಸಂಜ್ಞೆಗಳು ಶಕ್ತಿಗಳು, ಪರ,ಶಿವಕೂಡಿ, ಶಿವತತ್ವಗಳು).

**ಪಂಚಕಲ್ಯಾಣ**— ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ (ದೀಕ್ಷೆ), ಕೇವಲ ಬೋಧ, ನಿರ್ವಾಣ. (ಜೈ )

**ಪಂಚಕರ್ಮ**— ಉತ್ಕ್ಷೇಪಣ, ಅವಕ್ಷೇಪಣ, ಆಕುಂಚನ, ಪ್ರಸರಣ, ಗಮನ, ವೈದ್ಯಕ:- ವಮನ, ವಿರೇಚನ, ನಸ್ಯ, ಅನುವಾಸನ, ನಿರೂಹ.

**ಪಂಚಕಾರುಕ**— ಸ್ವರ್ಣಕಾರ, ಕರ್ಮಕಾರ, ಕಂಚುಗಾರ, ಬಡಗಿ, ಕಲ್ಕುಟಿಕ. ಪಕ್ಷಾಂತರ ತಕ್ಷಕ, ತಂತುವಾಯ, ನಾಪಿತ, ರಜಕ, ಚರ್ಮಕಾರ.

**ಪಂಚಕಾರ್ಯ**— ಬೀಜ, ಬಿಂದು, ಪತಾಕಾ, ಪ್ರಕರಿ. ಕಾರ್ಯ(ನಾಟಕೀಯ)

**ಪಂಚಕಾಲ**— ಪ್ರಾತಃ, ಸಂಗವ, ಮಧ್ಯಾಹ್ನ, ಅಪರಾಹ್ನ, ಸಾಯಾಹ್ನ,

**ಪಂಚಕ್ಲೇಶ**— ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ.

**ಪಂಚಕೋಶ**— ಅನ್ನಮಯಕೋಶ (ಸ್ಥೂಲ), ಪ್ರಾಣಮಯ, ಮನೋಮಯ, ವಿಜ್ಞಾನ ಮಯ, (ಸೂಕ್ಷ್ಮ) ಆನಂದಮಯಕೋಶ (ಕಾರಣ)

**ಪಂಚಕೃತ್ಯಗಳು**— ಸೃಷ್ಟಿ, ಸ್ಥಿತಿ, ಲಯ, ನಿಯಮನ, ಅನುಪ್ರವೇಶ.

**ಪಂಚಗತಿ**—ವಕ್ರ, ಋಜು, ತಿರ್ಯಕ್, ಊರ್ಧ್ವ, ಅಧಃ. (ಜ್ಯೋ)
**ಪಂಚಗವ್ಯ**—ದಧಿ, ಕ್ಷೀರ, ಘೃತ, ಗೋಮಯ, ಗೋಮೂತ್ರ.
**ಪಂಚಗೌಳ**—ಬಂಗಾಳ, ಸಾರಸ್ವತ, ಕನ್ಯಾಕುಬ್ಜ, ಗೌಡ, ಉತ್ಕಲ. (ಮೈಥಿಲ)
**ಪಂಚಜಗತ್**—ಸ್ವರ್ಗ, ನರಕ, ಮಾನವ, ತಿರ್ಯಗ್ಯೋನಿ, ಪ್ರೇತಲೋಕ. (ಬೌ)
**ಪಂಚತಪ**—(ಶಾರೀರಿಕ).ದೇವಗುರುಪೂಜೆ, ಪಾವಿತ್ರ್ಯ, ಸರಳತೆ, ಬ್ರಹ್ಮಚರ್ಯ,ಅಹಿಂಸೆ ಮಾನಸಿಕ:-ಕರಣ ಶುದ್ಧಿ, ಮನೋನಿಗ್ರಹ, ಈಶ್ವರಧ್ಯಾನ, ಮನಃಪ್ರಸನ್ನತೆ, ಶಾಂತಿ. ವಾಚಿಕಃ-ಸ್ವಾಧ್ಯಾಯ, ಯಥಾರ್ಥಭಾಷಣ, ಉದ್ವೇಗರಾಹಿತ್ಯ, ಪ್ರಿಯತ್ವ, ಹಿತವೃತ್ತಿ.
**ಪಂಚತರು**—(ದಿವ್ಯ) ಮಂದಾರ, ಪಾರಿಜಾತ, ಸಂತಾನ, ಕಲ್ಪವೃಕ್ಷ, ಹರಿಚಂದನ.
,, **ತತ್ವ**—ಬ್ರಹ್ಮ, ಮಾಯಾ, ಜೀವ, ಕಾಲ, ಕರ್ಮ. (ನಿಂಬಾರ್ಕ)
**ಪಂಚತಿಕ್ತ**—ನಿಂಬಾ, ಅಮೃತ, ವೃಷ, ಪಟೋಲ, ನಿದಿಗ್ಧಕ.
**ಪಂಚತೃಷ್ಣ**—1 ವಾತ, ಪಿತ್ಥ, ಕಫ, ಸನ್ನಿಪಾತ, ರಸಕ್ಷಯಜನ್ಯ. ಪರಿಣಾಮ:-ಕ್ಷಾಮ, ಮೂರ್ಛೆ, ನಿದ್ರೆ, ಸರ್ವಲಿಂಗ, ಕ್ಷಯ. (ಆಯುರ್ವೇದ)
**ಪಂಚತಂತ್ರ**—1 ಭೇದ, ಪರೀಕ್ಷಾ, ವಿಶ್ವಾಸ, ವಂಚನಾ, ಮಿತ್ರಕಾರ್ಯ. 2 ಮೋಹನ ವಶೀಕರಣ, ಉಚ್ಚಾಟನೆ, ವಿದ್ವೇಷಣ, ಮಾರಣ.
**ಪಂಚದೇವತೆಗಳು**—1 ಆದಿತ್ಯ, ಅಂಬಿಕೆ, ವಿನಾಯಕ, ಶಿವ, ವಿಷ್ಣು, (ಬ್ರಹ್ಮರು)
,, **ದ್ರಾವಿಡ**—ಕರ್ಣಾಟ, ಗುರ್ಜರ, ಮರಾಠ, ದ್ರವಿಡ, ತ್ರಿಲಿಂಗ (ಆಂಧ್ರ), ಭಾಷೆ:- ಆಂಧ್ರ, ದ್ರವಿಡ(ತಮಿಳು), ಕನ್ನಡ, ಮಲೆಯಾಳ, ತುಳು.
**ಪಂಚನದ**—ಶತದ್ರು, ವಿಪಾಶಾ, ಇರಾವತಿ, ಚಂದ್ರಭಾಗಾ, ವಿತಸ್ತಾ. (ಇವುಗಳಿಂದ ಕೂಡಿದ ಸಿಂಧು)
**ಪಂಚಪದಾರ್ಥ**—ಕಾರ್ಯ,ಕಾರಣ, ಯೋಗ,ವಿಧಿ,ದುಃಖಾಂತ (ಮೋಕ್ಷ). ಮಾಹೇಶ್ವರ.
**ಪಂಚಪದೀಸಂಕೇತ**—ನಭ, ಭೂಮಿ, ರವಿ, ಚಂದ್ರ, ಅಗ್ನಿ.
**ಪಂಚಪರಾಪ್ರಕೃತಿ**—ಸತೀ (ದುರ್ಗೆ), ರಾಧಾ, ಲಕ್ಷ್ಮೀ, ಸರಸ್ವತಿ, ಗಾಯತ್ರಿ(ಸಾವಿತ್ರಿ) ದೇವಿ. ಪು.
**ಪಂಚಪರಮೇಷ್ಠಿಗಳು**—ಅರ್ಹಂತ, ಸಿದ್ಧ,ಆಚಾರ್ಯ,ಉಪಾಧ್ಯಾಯ,ಸಾಧುಗಳು. (ಜೈ)
**ಪಂಚಪತ್ರ**—ಬರೆವವ, ಬರಕೊಡುವವ, ಬರೆಸಿಕೊಂಬವ, ಸಾಕ್ಷಿದ್ವಯ.
**ಪಂಚಪರ್ವ**—(ಮಹಾದಿನ) ಚತುರ್ದಶಿ, ಅಮಾವಾಸ್ಯೆ, ಅಷ್ಟಮಿ, ಪೂರ್ಣಿಮಾ, ರವಿಸಂಕ್ರಾಂತಿ.
**ಪಂಚಪಾಂಡವ**—ಯುಧಿಷ್ಠಿರ. ಭೀಮ, ಅರ್ಜುನ, ನಕುಲ, ಸಹದೇವ, (ಪೂರ್ವ ಜನ್ಮದಲ್ಲಿ ಪಂಚೇಂದ್ರರು:- ವಿಶ್ವಭುಕ್, ಭೂತಧಾಮ, ಶಿಬಿ, ಶಾಂತಿ, ತೇಜಸ್ವಿ) ಶಂಖಗಳು:-ಅನಂತವಿಜಯ, ಪೌಂಡ್ರಕ, ದೇವದತ್ತ, ಸುಘೋಷ, ಮಣಿಪುಷ್ಪಕ. ಉಪಪಾಂ

ಡವರು:-ಶ್ರುತಕೀರ್ತಿ, ಶ್ರುತಕರ್ಮ, ಶತಾನೀಕ, ಸುತಸೋಮ, ಪ್ರತಿವಿಂಧ್ಯ

**ಪಂಚಪೂಜಾಂಗ**— ಅಭಿಗಮನ (ಶುದ್ಧೀಕರಣ) ಉಪಾದಾನ (ಸಾಧನಸಂಗ್ರಹಣ), ಯೋಗ(ದೇವತಾತ್ಮಧ್ಯಾನ) ಸ್ವಾಧ್ಯಾಯ (ಜಪ ಅರ್ಥಾನುಸಂಧಾನ), ಇಜ್ಯಾ (ಉಪಾಸನೆ-ಯಥಾವಿಧಿ.)

**ಪಂಚಪ್ರಾಣ**— ಪ್ರಾಣ, ಅಪಾನ, ಉದಾನ, ಸಮಾನ, ವ್ಯಾನ, ಸ್ಥಾನ:-ಹೃದಯ, ಗುದ, ಕಂಠ, ನಾಭಿ, ಶರೀರಸರ್ವತ್ರ. ಉಪಪ್ರಾಣ:-ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ. ಸ್ಥಾನ:- ರೋಮನಾಳ, ನೇತ್ರ, ಪಾಣಿ, ಗುಹ, ಬ್ರಹ್ಮರಂಧ್ರ.

**ಪಂಚಶರ**— ಉನ್ಮಾದನ, ಸಮ್ಮೋಹನ, ಶೋಷಣ, ಮಾರಣ, ಸ್ತಂಭನ. ಕುಸುಮಾಸ್ತ್ರ ಪಂಚಕ:-ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ.

**ಪಂಚಬಂಧ**—(ಜೀವಸಂಬಂಧ)ಆಯು, ಕರ್ಮ, ಧನ, ವಿದ್ಯೆ, ಮೃತ್ಯು.

**ಪಂಚಭೂತತತ್ವ**— ಪೃಥ್ವಿ, ಆಪ, ತೇಜ, ವಾಯು, ಆಕಾಶ. ವ್ಯಾಪಾರ:-ಧಾರಣ, ಪಿಂಡೀಕರಣ, ಪಾಕ, ವ್ಯೂಹಕರಣ, ಅವಕಾಶ. ದೇವತೆಗಳು:-ಬ್ರಹ್ಮ, ವಿಷ್ಣು, ರುದ್ರ; ಈಶ್ವರ, ಸದಾಶಿವ.

**ಪಂಚಭೂತ ಸೃಷ್ಟಿಪ್ರಕಾರ**—ಕರ್ಮೇಂದ್ರಿಯ ಪಂಚಕ:-ಪಾಯು, ಉಪಸ್ಥ, ಪಾದ; ಪಾಣಿ, ವಾಕ್. ದೇವತೆ:-ಪ್ರಜಾಪತಿ, ಮೃತ್ಯು, ಸೂರ್ಯ, ಇಂದ್ರ, ಅಗ್ನಿ. ಜ್ಞಾನೇಂದ್ರಿಯ ಪಂಚಕ:-ಘ್ರಾಣ, ಜಿಹ್ವೆ, ನೇತ್ರ, ತ್ವಕ್, ಶ್ರೋತ್ರ. ದೇವತೆ:-ವರುಣ; ವಾಯು, ಸೂರ್ಯ, ಅಶ್ವಿನೇಯರು, ದಿಕ್. ವಿಷಯಪಂಚಕ:-ಗಂಧ, ರಸ; ರೂಪ,ಸ್ಪರ್ಶ,ಶಬ್ದ-ಕರ್ಮೇಂದ್ರಿಯವಿಷಯ ಪಂಚಕ:-ವಿಸರ್ಜನ, ಆನಂದ, ಗಮನ, ದಾನ, ವಚನ. ಅಂತಃಕರಣಗಳು:-ಅಹಂಕಾರ; ಚಿತ್ತ, ಬುದ್ಧಿ, ಮನ, ಜ್ಞಾತೃ,

**ಪಂಚಮಹಾದುಃಖ**—ಶಾರೀರ, ಮಾನಸ, ಕ್ಷೇತ್ರಜ, ಅನ್ಯೋದೀರಿತ, ರಾಕ್ಷಸೋದೀರಿತದುಃಖ. (ಜೈ)

**ಪಂಚಮಹಾಮುಖ**—(ಮಾನವೀಯ) ಪಿತೃಮಾತೃಪೂಜೆ, ಪತಿಸೇವೆ, ಸರ್ವಸಮತ್ವ, ಮಿತ್ರಾದ್ರೋಹ, ಭಗವದ್ಭಕ್ತಿ, (ವ್ಯಾಸೋಕ್ತಿ)

**ಪಂಚಮಹಾಪಾತಕ**— ಬ್ರಹ್ಮಹತ್ಯೆ, ಸ್ವರ್ಣಸ್ತೇಯ, ಸುರಾಪಾನ, ಗುರುತಲ್ಪಗಮನ, ತತ್ಸಹವಾಸ.

**ಪಂಚಮಹಾಯಜ್ಞ**—ಬ್ರಹ್ಮಯಜ್ಞ, ಪಿತೃಯಜ್ಞ, ದೇವಯಜ್ಞ, ಭೂತಯಜ್ಞ, ಮನುಷ್ಯಯಜ್ಞ. • ಕರಣ:-ಅಧ್ಯಾಪನ, ತರ್ಪಣ, ಹೋಮ, ಬಲಿ, ಅತಿಥಿಪೂಜೆ.

**ಪಂಚಮಾನಸ ಪುತ್ರರು**— ಸನಕ, ಸನಂದನ, ಸನಾತನ, ಸನತ್ಸುಜಾತ, ಸನತ್ಕುಮಾರ।

**ಪಂಚಮಹಾವಾದ್ಯ**—1 ಶಂಖ, ಭೇರಿ, ಕಹಳೆ, ಘಂಟೆ, ವೀಣಾ. 2 ಶೃಂಗ (ಕೊಂಬು), ತಮ್ಮಟೆ (ಹಲಗೆ), ಶಂಖ (ಧವಳ), ಭೇರಿ (ಬಾಜಾ), ಜಾಗಟೆ (ಜಯಘಂಟೆ)

**ಪಂಚಮಹಾವ್ರತ**—1 ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ.
2 ಸಾಂವತ್ಸರ, ರಾಮನವಮಿ, ಕೃಷ್ಣಜಯಂತಿ, ಶಿವರಾತ್ರಿ, ದಶಾವತಾರ.

**ಪಂಚಮುಖ**—(ಮಹೇಶಾನಪರ) ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ. ಕಲೆ:-ನಿವೃತ್ತಿ, ಪ್ರತಿಷ್ಠೆ, ವಿದ್ಯಾ, ಶಾಂತಿ, ಶಾಂತಾತೀತೆ; ಜನ್ಯ:-ಪೃಥ್ವಿ, ಆಪ್ ತೇಜ, ವಾಯು, ಆಕಾಶ. ಪಶುಗಳು ಮತ್ತು ವರ್ಣಗಳು:- ನಂದ, ಕಪಿಲ, ಭದ್ರ, ಅಸಿತ, ಸುರಭಿ- ರಕ್ತ, ಸುಶೀಲೆ- ಶ್ವೇತ, ಸುಮನೆ-ಚಿತ್ರವರ್ಣ.

**ಪಂಚಮುದ್ರೆ**—ಶಂಖ, ಚಕ್ರ, ಗದಾ, ಪದ್ಮ, ನಂದಕ.

**ಪಂಚರತ್ನ**—ನೀಲ, ಪದ್ಮರಾಗ, ತಾರ, ವಿದ್ರುಮ, ವಜ್ರ. ಪ್ರಕಾರಾಂತರ:-1 ಕನಕ, ನೀಲ, ಪದ್ಮರಾಗ, ಮುಕ್ತಾ, ಹೀರ. 2 ಮುಕ್ತಾ, ಪ್ರವಾಳ, ರಜತ, ರಾಜಾವರ್ತ, ಸ್ವರ್ಣ.

**ಪಂಚರಂಗ**—ಅಂತರಂಗ, ರಣರಂಗ, ಮಧ್ಯರಂಗ, ನಾಟ್ಯರಂಗ, ಮಲ್ಲರಂಗ.

**ಪಂಚಲಕ್ಷಣ**—(ಮಹಾಪುರಾಣಕ್ಕೆ) ಸರ್ಗ, ಪ್ರತಿಸರ್ಗ (ಪ್ರತ್ಯುತ್ಪತ್ತಿ) ವಂಶ, ಮನ್ವಂತರ ವಂಶಾನುಚರಿತ, (ಉಪಪುರಾಣಕ್ಕೆ) ವೃತ್ತಿ, ರಕ್ಷೆ, ಮುಕ್ತಿ. ಕಾರಣ:-(ಜೀವ),ಅಪಾಶ್ರಯ (ಬ್ರಹ್ಮ). ಪ್ರಣವಸಂಬಂಧ:-ತಾರಕ,ದಂಡಕ, ಕುಂಡಲ,ಅರ್ಧೇಂದು,ಬಿಂದು,(ವೀ.ಶೈ ಪು,

**ಪಂಚಲೋಕ**—ದ್ಯು, ಮಹರ್ಲೋಕ, ಜನಲೋಕ, ತಪಃ, ಸತ್ಯಲೋಕ. (ಉ.)

,, **ಲೋಹ**—ಸ್ವರ್ಣ, ರಜತ, ತಾಮ್ರ, ಕಬ್ಬಿಣ, ಸೀಸ.

,, **ವರ್ಣ**—ಕೆಂಪು, ಕಪ್ಪು, ಬಿಳಿದು, ಹಳದಿ, ನೀಲ.

,, **ವರ್ಗ**—ಕ, ಚ, ಟ, ತ, ಪವರ್ಗಗಳು. (ವ್ಯಾ)

,, **ವಲ್ಕಲ**—ಅಶ್ವತ್ಥ, ಪ್ಲಕ್ಷ (ಬಸಿರಿ), ವೇತಸ, ಉದುಂಬರ, ನ್ಯಗ್ರೋಧ:

,, **ವಾದ್ಯ ವಿಧಿ**—ನಿಬಿಡತ್ವ, ಪ್ರೌಢತ್ವ, ಮುಖರತ್ವ, ಶೀಘ್ರತ್ವ, ಮಾಧುರ್ಯ

,, **ವಿಧ ಅಕ್ಕರಗಳು**—ಪಿರಿಯಕ್ಕರ, ದೊರೆಯಕ್ಕರ, ನಡುವಕ್ಕರ, ಎಡೆಯಕ್ಕರ, ಕಿರಿಯಕ್ಕರ. (ಇವು ಕನ್ನಡದ ಪದ್ಯಭೇದಗಳು. ಛಂದೋಂಬುಧಿ)

**ಪಂಚವಿಧ ಅಜ್ಞಾನ**—(ಅವಿದ್ಯಾ ಪಂಚಪರ್ವ). ತಮ, ಮೋಹ, ಮಹಾಮೋಹ (ಅತಿ ವಿಷಯಾಸಕ್ತಿ) ತಾಮಿಸ್ರ (ಕ್ರೋಧ-ದ್ವೇಷ) ಅಂಧತಾಮಿಸ್ರ, (ಭಯ, ಅಭಿನಿವೇಶ)

**ಪಂಚವಿಧಕಾಮ**—ಅಕಾಮ, ನಿಷ್ಕಾಮ, ಆಪ್ತಕಾಮ, ಆತ್ಮಕಾಮ, ಚತುಷ್ಕಾಮ.

,, **ಕಥಾಭೇದ**—ಕಥೆ, ಆಖ್ಯಾಯಿಕೆ, ಖಂಡಕಥೆ,ಉಪರಿಕಥೆ,ಕಥಾನಿಕೆ.(ಅಗ್ನಿ-ಪು

,, **ಜೀವರು**—ದೇವ, ಪಿತೃ, ಋಷಿ, ಚಕ್ರವರ್ತಿ,ಮಾನವ(ದ್ವೈ).ಭವ್ಯಾಭವ್ಯ(ಜೈ)

,, **ಪಿತೃ**—ಹೆತ್ತತಂದೆ, ಉಪನೇತ, ಕನ್ಯಾದಾತ, ಅನ್ನದಾತೃ, ಭಯತ್ರಾತ.

,, **ಪುತ್ರರು**—ಋಣಪುತ್ರ, ಶತ್ರುರೂಪಿ, ಸೇವಾಸಕ್ತ, ತಟಸ್ಥ, ಗೃಹಪಾಲಕ.

,, **ಪಂಚಕ**—ಮೃತ್ಯು, ಅಗ್ನಿ ರಾಜ, ಚೋರ, ರೋಗಪಂಚಕ, ಪ್ರಾಯಶ್ಚಿತ್ತ ದೀಪ, ಶ್ರೀಗಂಧ, ಸಿಂಬೆ, ಶಸ್ತ್ರ, ಧಾನ್ಯದಾನ, (ಜ್ಯೋ),

**ಪಂಚವಿಧತಾರಾಬಂಧ**—(ರತ್ನಮಾಲವಿಶೇಷ) :-ಶೀರ್ಷಕ, ಉಪಶೀರ್ಷಕ, ಪ್ರಕಾಂಡ, ಅವಘಾಟಕ, ತರಲಬಂಧ. ಮಣಿಗಣ,ಸಂಖ್ಯಾನುಗತವಾಗಿದಶವಿಧ:- ಇಂದ್ರಚ್ಛಂದ, ವಿಜಯಚ್ಛಂದ, ದೇವಚ್ಛಂದ, ಅರ್ಧಹಾರ, ರಶ್ಮಿಕಲಾಪ, ಗುಚ್ಛ, ಅರ್ಧಗುಚ್ಛ,ನಕ್ಷತ್ರ, ಮಾಣವಕ, ಅರ್ಧಮಾಣವಕ. (ಕೌಟಿಲ್ಯ. ಶಾ)

**ಪಂಚವಿಧಬ್ರಾಹ್ಮಣರು**—ದೇವಬ್ರಾಹ್ಮಣ,ಮುನಿಬ್ರಾಹ್ಮಣ,ದ್ವಿಜ,ಕ್ಷಾತ್ರ, ವೈಶ್ಯಬ್ರಾಹ್ಮಣ.

**ಪಂಚವಿಧಮಾತೃಗಳು**—ಹೆತ್ತತಾಯಿ, ಹೆಂಡತಿಯತಾಯಿ, ಅಣ್ಣನ, ಗುರುವಿನ,ರಾಜನ ಹೆಂಡಿರು.

**ಪಂಚವಿಧರಜ್ಜುಭೇದ**—ಪಾದ, ಜಾನು, ನಾಭಿ, ಕಂಠ, ಶಿರ, (ಜ್ಯೋ)

**ಪಂಚವಿಧಶಾಸ್ತ್ರವಿಶೇಷ**—ಲೌಕಿಕ, ವೈದಿಕ, ಅಧ್ಯಾತ್ಮಿಕ, ಅತಿಮಾರ್ಗಿಕ, ಮಂತ್ರಶಾಸ್ತ್ರ.

**ಪಂಚವಿಧಶ್ರಾದ್ಧಗಳು**—ನಿತ್ಯ,ನೈಮಿತ್ತಿಕ,ಕಾಮ್ಯ,ವೃದ್ಧಿ,ಪಾರ್ವಣಶ್ರಾದ್ಧ, (ಯಮ. ಸ್ಮೃ)

,, **ಸಂಧಿಪ್ರಕಾರ**—ಸ್ವರ, ವ್ಯಂಜನ, ಸ್ವಾದಿ, ವಿಸರ್ಗ, ಅನುಸ್ವಾರಸಂಧಿ.

,, **ಸಂಸಾರ**—ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವಭೇದ. (ಜೈ)

**ಪಂಚವೇದಾಂಗ**—ವಿಧಿ, ಅರ್ಥವಾದ, ಮಂತ್ರ, ಸ್ಮೃತಿ, ನಾಮಧೇಯ. (ಜೈಮಿನಿ)

,, **ಶಿಖಾ**—ಜುಟ್ಟು, ಕಕ್ಷ, ಭ್ರೂ,ರೆಪ್ಪೆ, ಪೃಷ್ಟರೋಮ ರಾಜಿ.

,, **ಸಖೀವಿಶೇಷ**—ಸಖಿ (ನಿತ್ಯಸಖಿ), ಪ್ರಾಣಸಖಿ, ಪ್ರಿಯಸಖಿ, ಪರಮೇಷ್ಠಿಸಖಿ. ರಾಧಾಸಖಿ.

,, **ಸಾತ್ವಿಕಗುಣ**—ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ, ಸಿದ್ಧಿ, (ವೈರಾಗ್ಯ:-ಯತಮಾನ, ವ್ಯತಿರೇಕ, ಏಕೇಂದ್ರಿಯ, ವಶೀಕಾರ, ಐಶ್ವರ್ಯ, ಸಿದ್ಧಿ.)

,, **ಸುಗಂಧ**—ಜಾತಿಫಲ, ಗುವಾಕ, ಲವಂಗಪುಷ್ಪ, ಕಕ್ಕೋಲ, ಕರ್ಪೂರ.

,, **ಸ್ನಾನ**—ಆಗ್ನೇಯ, ವಾರುಣ, ಬ್ರಾಹ್ಮ, ವಾಯುವ್ಯ, ದಿವ್ಯಸ್ನಾನ, (ಉ)

,, **ಸ್ತೋತ್ರ**—(ವಿಷ್ಣುಪರ):- ವಿಷ್ಣುಸಾಹಸ್ರನಾಮ, ಭೀಷ್ಮಸ್ತವರಾಜ, ಗಜೇಂದ್ರ ಮೋಕ್ಷ, ಅನುಸ್ಮೃತಿ, ಗೀತೆ.

,, **ಸಂಧಿಗಳು**—ಮುಖ, ಪ್ರತಿಮುಖ, ಗರ್ಭ, ವಿಮರ್ಶೆ, ನಿರ್ವಹಣ ಸಂಧಿ (ನಾಟಕೀಯ).

,, **ಸಂಪ್ರದಾಯ**— 1 ಸೌರ 2 ಗಾಣಾಪತ್ಯ 3 ಶಾಕ್ತ 4 ಶೈವ, 5 ವೈಷ್ಣವ. (1) ಸೂರ್ಯಬಿಂಬವನ್ನುದೇವನೆಂದೂ, ಸೂರ್ಯನನ್ನು ಬ್ರಹ್ಮನೆಂದೂ, ವಿಷ್ಣುವೆಂದೂ,ಶಿವನೆಂದೂ,ಮೂರ್ತಿತ್ರಯವೆಂದೂ,ಸರ್ವಾವಯವವೆಂದೂ, ಭಾವಿಸುವುದು. (2)ಐದುವಿಧ—ಮಹಾಗಣಪತ್ಯುಪಾಸಕ, ಕುಮಾರ ಗಣಪತ್ಯುಪಾಸಕ, ಸ್ವರ್ಣ ಗಣಪತ್ಯುಪಾಸಕ. ಹೇರಂಭಗಣಪತ್ಯುಪಾಸಕ, ನವನೀತಗಣಪತ್ಯುಪಾಸಕ. (3)ವಾಮ, ದಕ್ಷಿಣಮಾರ್ಗಿ

,, ಸಂವತ್ಸರಭೇದ—ಸೌರ, ಸಾವನ, ಬಾರ್ಹಸ್ಪತ್ಯ, ಚಾಂದ್ರ, ನಾಕ್ಷತ್ರ..

,, ಸ್ಕಂದ—(ಅರ್ಥ-ತತ್ವ):-ರೂಪ, ವೇದನಾ, ವಿಜ್ಞಾನ, ಸಂಜ್ಞಾನ, ಸಂಸ್ಕಾರ(ಬೌ)

,, ಹೇತ್ವಾಭಾಸ—ಸವ್ಯಭಿಚಾರ, ವಿರುದ್ಧ, ಪ್ರಕರಣ, ಸಾಧ್ಯಸಮ, ಕಾಲಾತೀತ, ವೈಶೇಷಿಕ- ಅನೈಕಾಂತ, ವಿರುದ್ಧ, ಸಪ್ರತಿಪಕ್ಷ, ಬಾಧಕಾ ಲಾತ್ಯಯಾಪದಿಷ್ಟ, ಜೈನ:- ಅಸಿದ್ಧ, ವಿರುದ್ಧ, ಅನೈಕಾಂತಿಕ, ಅಕಿಂಚಿತ್ಕರ. (ನಾಲ್ಕುವಿಧ).

ಪಂಚಾಚಾರ—ಜ್ಞಾನ, ದರ್ಶನ, ವೀರ್ಯ, ಚಾರಿತ್ರ, ಉಪಚಾರ, ವೀ.ಶೈ. :-ಸದಾಚಾರ ಗಣಾಚಾರ, ಭೃತ್ಯಾ, (ನಿತ್ಯಾ) ಚಾರ, ಶಿವಾಚಾರ, ಲಿಂಗಾಚಾರ.

ಪಂಚಾಣುವ್ರತ—(ಸಮ್ಯಕ್ಚಾರಿತ್ರ್ಯ)ಬ್ರಹ್ಮಚರ್ಯ,ಅಹಿಂಸೆ, ಸೂನೃತ, ಅಸ್ತೇಯ,ಅಪರಿಗ್ರಹ (ನಿಷ್ಕಾಮನೆ), ಜೈ.

ಪಂಚಾಧಿಕಾರಿಗಳು— ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢ.

ಪಂಚಾಧರ್ಮವಿಭೇದ-ವಿಧರ್ಮ,ಪರಧರ್ಮ, ಧರ್ಮಾಭಾಸ, ಛಲಧರ್ಮ, ಉಪಧರ್ಮ

ಪಂಚಾಗ್ನಿ— 1 ಪೂರ್ವ ಪಶ್ಚಿಮ ದಕ್ಷಿಣ, ಉತ್ತರಾಗ್ನಿಗಳು ಮತ್ತು ಸೂರ್ಯ. 2 ಅಗ್ನಿಹೋತ್ರಿಗಳಿಗೆ:-ದಕ್ಷಿಣ, ಗಾರ್ಹಪತ್ಯ, ಆಹವನೀಯ, ಸಭ್ಯ, ಅವಸಥ್ಯ, 3 ಶಾರೀರಿಕ: ಪಾಚಕಾಗ್ನಿ, ರಂಜಕಾಗ್ನಿ, ಸಾಧಕಾಗ್ನಿ, ಆಲೋಕನಾಗ್ನಿ, ಭ್ರಾಜಕಾಗ್ನಿ, ಸ್ಥಾನ:-ಜಠರ ರಕ್ತಾಂತರ, ಹೃತ್, ದೃಕ್, ತ್ವಕ್.

ಪಂಚಾಗ್ನಿವಿದ್ಯೆ—(ಗತಿಹೇತುಕ)ದ್ಯು:,ಪರ್ಜನ್ಯ, ಪೃಥ್ವಿ, ಪುರುಷ, ಸ್ತ್ರೀ. ಆಹುತಿರೂಪ:- ಶ್ರದ್ಧಾ, ಸೋಮ, ವೃಷ್ಟಿ, ಅನ್ನ, ರೇತಸ್ಸು, (ವೇದಾಂತ. ಉ)

ಪಂಚಾಮೃತ—ದಧಿ, ಘೃತ, ಮಧು, ಕ್ಷೀರ, ಶರ್ಕರಾ.

ಪಂಚಾವಸ್ಥೆ - ಜಾಗೃತ್, ಸ್ವಪ್ನ, ಸುಷುಪ್ತಿ, ತುರೀಯ, ತುರೀಯಾತೀತ. ನಾಟಕೀಯ:- ಆರಂಭ, ಯತ್ನ, ಪ್ರಾಪ್ತ್ಯಾಶಾ, ನಿಯತಾಪ್ತಿ, ಫಲಾಗಮ.

ಪಂಚಾಶ್ಚರ್ಯ—ಸುರಘೋಷ, ದೇವತೂರ್ಯಾರಾವ, ಪುಷ್ಪವೃಷ್ಟಿ, ಅಮೃತವೃಷ್ಟಿ ದಿವ್ಯಮರುತ್ಸಂಚಾರ, (ಜೈ)

ಪಂಚಾಸನ—ಸಿದ್ಧ, ಸ್ವಸ್ತಿಕ, ಪದ್ಮ, ಅರ್ಧಚಂದ್ರ, ಪರ್ಯಂಕಾಸನ (ವ. ಶಾ)

ಪಂಚಾಸ್ತಿಕಾಯ—(ಜೀವಾಜೀವಗಳು):- ಜೀವಾಸ್ತಿಕಾಯ (ಬುದ್ಧ, ಮುಕ್ತ, ಸಿದ್ಧ,) ಪುದ್ಗಲಾಸ್ತಿಕಾಯ (ಪೃಥ್ವ್ಯಾದಿತತ್ವ, ಸ್ಥಾವರ, ಜಂಗಮ)ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ. (ಜೈ.)

ಪಂಚಾಂಗ—(ಜೋ.) ತಿಥಿ, ವಾರ, ನಕ್ಷತ್ರ, ಯೋಗ, ಕರಣ. ಶಾರೀರಿಕ:-ಜಾನು, ವಕ್ಷ ಶಿರ, ಬಾಹು, ದೃಷ್ಟಿ. ವಾಕ್ಯಪರ:-ಪ್ರತಿಜ್ಞೆ, ಉದಾಹರಣೆ, ಉಪನಯ, ಕಾರಣ, ನಿಗಮನ, ವೃಕ್ಷಪರ:-ಫಲ, ಮೂಲ, ಪತ್ರ, ಪುಷ್ಪ, ತ್ವಕ್.

ಪಂಚಾಂಗಾಭಿನಯ—ಚಿತ್ತ, ಅಕ್ಷಿ, ಭ್ರೂ, ಹಸ್ತ, ಪಾದಾಭಿನಯ.

ಪಂಚೋಪಚಾರ—ಜಲ, (ಅಥವಾ ಗಂಧ) ಪುಷ್ಪ, ಧೂಪ, ದೀಪ, ನೈವೇದ್ಯ.

**ಅವಸ್ಥಾಪಂಚಕ**—(ಸ್ತ್ರೀಪರ)ಕನ್ಯಾ, ಭಗಿನಿ; ಪತ್ನಿ, ಮಾತಾ. ಮಾತಾಮಹಿ (ಅವಸ್ಥಾತ್ರಯ:- ಕನ್ಯಾ, ಭಾರ್ಯೆ, ಮಾತೃ).

**ಅಭಕ್ಷ್ಯಪ್ರಾಣಿಪಂಚಕ**— ಮರ್ಕಟ, ಶುನಕ, ಶಶ, ಕೂರ್ಮ, ಗೋಧ, (ಉಡು).

**ಅವ್ಯಯಪಂಚವಿಧ**—ಉಪಸರ್ಗ, ಸಮುಚ್ಚಯ, ಅನುಕರಣ, ನಿಪಾತ, ಸ್ಥಾನಕಾಲ ಕ್ರಿಯವಿಶೇಷಣಾವ್ಯಯ, (ವ್ಯಾ).

**ಅರ್ಥೋಪಕ್ಷೇಪಪಂಚಕ**—ವಿಷ್ಕಂಭ, ಪ್ರವೇಶಕ, ಚೂಲಿಕಾ, ಅಂಕಾಸ್ಯ, ಅಂಕಾವತಾರ (ನಾಟಕೀಯ).

**ಅಶ್ವಧಾರಾಪಂಚಕ**—ಆಸ್ಕಂಧಿತ, ಧೋರಿತಕ, ರೇಂಚಿತ, ವಲ್ಗಿತ, ಪ್ಲುತ, (ಸಮಗತಿ, ತಾಳಗತಿ, ಬಿರುನಡೆ, ಸುಳಿನಡೆ, ಕುಣಿನಡೆ.)

**ಆಗ್ನೇಯಪಂಚಸ್ವರೂಪ**—ಬ್ರಾಹ್ಮ, (ಅರಣಿಗರ್ಭ) ಪ್ರಾಜಾಪತ್ಯ, ಗಾರ್ಹಸ್ಥ್ಯ, ದಕ್ಷಿಣಾಗ್ನಿ, ಕ್ರವ್ಯಾದಾಗ್ನಿ (ನೀಚ).

**ಆತ್ಮನಪಂಚಲಕ್ಷಣ**—ಸತ್, ಚಿತ್, ಆನಂದ, ನಿತ್ಯ. ಪರಿಪೂರ್ಣ.

**ಅಂತಃಕರಣವೃತ್ತಿಗಳು**—ಪ್ರಮಾಣ, ವಿಪರ್ಯಯ, ವಿಕಲ್ಪ, ಸ್ಮೃತಿ, ನಿದ್ರೆ(ಯೋಗ. ಶಾ)

**ಈಶ್ವರತತ್ವಪಂಚಪ್ರಕಾರ**—ಪರ (ಏಕ), ವ್ಯೂಹ (ಚತುರ್ವಿಧ), ವಿಭವ (ಮತ್ಸ್ಯಾದ್ಯವತಾರ), ಅಂತರ್ಯಾಮಿ (ಸರ್ವಶರೀರವ್ಯಾಪ್ತ), ಅರ್ಚಾವತಾರ (ಪುಣ್ಯಕ್ಷೇತ್ರಗಳವಿಗ್ರಹರೂಪ).

**ಉತ್ಪಾತಪಂಚಕ**—ವೈಹಾಯಸ, ದಿಗ್ಜನಿತ, ಭೌಮ, ಸೈನ್ಯಜ, ಗೃಹೋದ್ಭೂತ.

**ಚಿತ್‌ತತ್ವಪಂಚಕ**—ಶಿವ, ಶಕ್ತಿ, ಸಾದಾಖ್ಯ (ಸದಾಶಿವ); ಈಶ್ವರ; ಸದ್ವಿದ್ಯೆ; (ವೀ. ಶೈ.)

**ಜೀವನ್ಮುಕ್ತಿಪ್ರಯೋಗ**— (ಪ್ರಯೋಜನ) ತಪ; ಜ್ಞಾನ; ಸರ್ವಸಂವಾದ; ದುಃಖಕ್ಷಯ, ಸುಖೋದಯ.

**ತಿರ್ಯಗ್ಯೋನಿಪಂಚಕ**—ಪಕ್ಷಿ; ಮೃಗ; ಪಶು, ವಾನರ; ಸರೀಸೃಪ(ಉ.)

**ದುಃಖಪಂಚಕ**—ಗರ್ಭ; ಜನ್ಮ; ರೋಗ; ಜರಾ; ಮರಣ ದುಃಖ. (ಬೌ:.ಗರ್ಭದಬದಲು:ಪ್ರಿಯವಿಯೋಗ).

**ದುರ್ದಾನಪಂಚಕ**— (ಮೃತ್ಯುಪರಿಹಾರಾರ್ಥ)ತಿಲ; ತೈಲಘಟ; ಕಾರ್ಪಾಸ; ಲೋಹದಂಡ (ತ್ರಿಶೂಲ); ಕೂಷ್ಮಾಂಡ.

**ಧನಿಷ್ಠಾಪಂಚಕ**—ಧನಿಷ್ಠೆ;(ಉತ್ತರಾರ್ಧ) ಶತಭಿಷ; ಪೂರ್ವ-ಉತ್ತರಾಭಾದ್ರ; ರೇವತಿ. (ಜ್ಯೋ.)

**ನಿಯಮಾಂಗಪಂಚಕ**—ಶೌಚ; ತಪ. ಸಂತೋಷ; ಸ್ವಾಧ್ಯಾಯ; ಈಶ್ವರಧ್ಯಾನ.

**ನೇತ್ರೀಯಪಂಚಮಂಡಲ**—ಸೂಕ್ಷ್ಮ ; ಚರ್ಮ; ಶುಕ್ಲ; ಕೃಷ್ಣ; ಧ್ವಜಮಂಡಲ.

**ಪರೋಕ್ಷಜ್ಞಾನಪ್ರಕಾರಪಂಚಕ**—ಸ್ಮೃತಿ;ಪ್ರತ್ಯಭಿಜ್ಞೆ; ತರ್ಕ; ಅನುಮಾನ; ಆಗಮ.(ಜೈ)

ಪ್ರತ್ಯಕ್ಷಪಂಚದೇವತಾತ್ಮರಾಜಗಣ— ಪ್ರತಾಪ; ಪರಾಕ್ರಮ; ಸೌಮ್ಯ; ದಂಡ, ಪ್ರಸನ್ನತ್ವ. ದೇವರು:- ಅಗ್ನಿ, ಇಂದ್ರ, ಸೋಮ, ಯಮ, ವರುಣ.

**ಪ್ರಪಂಚವ್ಯವಹಾರ ಪಂಚವಿಧ**—ಜನ್ಮ, ಸ್ಥಿತಿ, ಲಯ, ತಿರೋಭಾವ, ಅನುಗ್ರಹ, (ಶಿವಾದ್ವೈತ).

**ಬ್ರಹ್ಮರೂಪಾಂಶಪಂಚಕ**—ಅಸ್ತಿ, ಭಾತಿ(ಪ್ರತೀತಿ,) ಪ್ರಿಯ (ಆನಂದ), ನಾಮ, ರೂಪ.

**ಮಾನುಷಿಕಶಕ್ತಿ** ,, —ಪ್ರಾಣ, ಕ್ರಿಯಾ, ಧ್ಯಾನ, ಭಾವನಾ, ಬುದ್ಧಿಶಕ್ತಿ.

**ಮಾಯಾ** ,, —ತಮ, ಮಾಯೆ, ಮೋಹ, ಅವಿದ್ಯೆ, ಮಿಥ್ಯೆ. ಲಕ್ಷಣ:- ಅಸತ್, ಜಡ, ಶೋಕ, ಅನಿತ್ಯ, ಖಂಡಿತ.

**ಮಾಯಾಸಹಾಯಿಪಂಚತತ್ವ**— ಕಲೆ, ಕಾಲ, ನಿಯತಿ, ರಾಗ, ವಿದ್ಯೆ.

**ಮಂತ್ರಾಸ್ತ್ರಪಂಚಕ**—ಮದನ, ಮೋಹನ, ಉನ್ಮಾದನ, ತಾಪನ, ವಶೀಕರಣ.

**ಮಂತ್ರಾಂಗಪಂಚಪ್ರಕಾರ**—ಕರ್ಮಾರಂಭೋಪಾಯ, ಪುರುಷದ್ರವ್ಯಸಂಪತ್ತಿ, ದೇಶಕಾಲವಿಭಾಗ, ವಿನಿಪಾತ್ರಪ್ರತಿಕಾಲ, ಕಾರ್ಯಸಿದ್ಧಿ.

**ಯೋಗಪಂಚಕ**—(ನಿಧಿದ್ಯಾಸನರೂಪ):-ಮಂತ್ರ, ಸ್ಪರ್ಶ, ಭಾವ, ಅಭಾವ, ಮಹಾಯೋಗಗಳು

**ರೋಗವಿಜ್ಞಾನ**—(ವಿಧಾನ)ಪ್ರಕಾರ:-ರೂಪ, ಪೂರ್ವರೂಪ, ಅಪಶಯಾನುಪಶಯ, ಸಂಪ್ರಾಪ್ತಿ, ವಿಕಲ್ಪ.

**ಲಲಿತಕಲಾಪಂಚಕ**—ವಾಸ್ತು, ಶಿಲ್ಪ ಸಾಹಿತ್ಯ, ಚಿತ್ರ, ಸಂಗೀತಕಲೆ.

**ವಾಸನಾಪಂಚಕ**—ರಾಗ, ದ್ವೇಷ, ಅಸ್ಮಿತ, ಭೇದ, ಅಭಿನಿವೇಶ.

**ವೇದಾಧ್ಯಯನೀಯಪಂಚಪ್ರಯೋಗ**—ಸ್ವೀಕಾರ (ಗುರುಮುಖ),. ಅರ್ಥವಿಚಾರ, ಮಂತ್ರಾಭ್ಯಸನ, ತಪ (ಆಚರಣೆ). ಅಧ್ಯಾಪನ (ಪ್ರವಚನ).

**ಶಕ್ತಿಯಪಂಚಲಕ್ಷಣ**—ಅಭಾಸ (ಪ್ರಕಾಶ), ರಕ್ತಿ (ವರ್ಣವ್ಯತ್ಯಯ), ವಿಮರ್ಶನ, ಬೀಜಾವಸ್ಥಾನ, ವಿಲಾಪನತಾ

**ಶುಭಾಗಮಪಂಚಕ**—ವಸಿಷ್ಠಸಂಹಿತಾ, ಸನಕ, ಶುಕ, ಸನಂದನ, ಸನತ್ಕುಮಾರ, ಸಂಹಿತೆಗಳು.

**ಶಿವಮತಪಂಚಪ್ರಕಾರ**—ಶುದ್ಧ, ಮಿಶ್ರ, ಮಾರ್ಗ, ಅವಾಂತರ, ವೀರಶೈವ.

**ಸತೀಪಂಚಕ**—ಸೀತಾ, ಸಾವಿತ್ರಿ, ದಮಯಂತಿ, ಅರುಂಧತಿ, ದೇವಹೂತಿ.

**ಸ್ಥಾನಪಂಚಕ**—ಆಲೀಢ, ಪ್ರತ್ಯಾಲೀಢ, ಸಮಪಾದ, ವಿಶಾಖ, ಮಂಡಲ (ವೀರರುಯುದ್ಧಕ್ಕೆನಿಲ್ಲುವರೀತಿ.)

**ಸಂಗೀತ ಪಂಚಾಂಗ**—ಹೀಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ಉಪದ್ರವ, ನಿಧನ. ಪಕ್ಷಾಂತರ:-ಹೀಂಕಾರ, ಪ್ರಸ್ತಾವ, ಆದಿ, ಉದ್ಗೀಥ, ಪ್ರತಿಹಾರ. ಈಗಪ್ರಚಲಿತ:- ಹೀಂಕಾರ, ಪ್ರಸ್ತಾವ, ಉದ್ಗೀಥ, ಪಂಚಸ್ವರಜಾತಿ,(ವರ್ಣಭೇದ):- ದೀಪ್ತಾ, ಆಯತಾ,

ವೃದು, ಮಧ್ಯಾ, ಕರುಣ. (ರಸೋತ್ಪಾದಕ

**ಷಟ್ಕರ್ಮ**—(1)ಯಜನ, ಯಾಜನ, ಅಧ್ಯಯನ, ಅಧ್ಯಾಪನ, ದಾನ, ಪ್ರತಿಗ್ರಹ. (2) ಉಂಛ, ಪ್ರತಿಗ್ರಹ, ಭಿಕ್ಷೆ, ಕರ್ಷಕ, ಗೋಪಾಲನ, ವಾಣಿಜ್ಯ (ವಾರ್ತಿಕ). (3) ಶ್ರಾವಕರಿಗೆ:-ತಪ, ಸಂಯಮ, ಚತುರ್ವಿಧಧ್ಯಾನ, ಗುರುಸೇವೆ, ಸ್ವಾಧ್ಯಾಯ, ದೇವಪೂಜೆ (ಜೈ.) ಅರ್ಥೋಪಾರ್ಜನೋಪಾಯ—ಅಸಿ, ಮಸಿ (ಬರಹಾನ್ನ), ಕೃಷಿ, ವಾಣಿಜ್ಯ. ಶಿಲ್ಪ, ಪಶುಪಾಲನ.

**ಷಟ್ಚಕ್ರ**—ಮೂಲಾಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ, ಆಜ್ಞಾ. ಆಕಾರ:-ಚತುರಸ್ರ, ಅರ್ಧಚಂದ್ರ, ತ್ರಿಕೋಣ, ಷಡ್ಕೋಣ, ವೃತ್ತ, ಚಿತ್ರ. ಸ್ಥಾನ:-ದೇಹಮಧ್ಯ (ಗುದ) ಲಿಂಗ, ನಾಭಿ, ಹೃದಯ, ತಾಲು, ಲಲಾಟ (ಭ್ರೂಮಧ್ಯ). ಕಮಲ ದಳ:-ಚತುಃ, ಷಟ್, ದಶ, ದ್ವಾದಶ, ಷೋಡಶ, ದ್ವಿದಳ. ಅಕ್ಷರ:-ವಾದಿಸಾಂತ, ಬಾದಿ ಸಾಂತ, ಡಾದಿಫಾಂತ, ಕಾದಿಠಾಂತ, ಅ-ಔಅಂತ, ಹಂಕ್ಷ. ದೇವರು:-ಗಣೇಶ, ಅಬ್ಜಾಸನ, ಹರಿ, ರುದ್ರ, ಜೀವ, ಬಿಂದುರೂಪ. ಭೂತಗಳು:-ಪೃಥ್ವಿ,ಆಪ್,ತೇಜ, ವಾಯು ಆಕಾಶ, ಮನಸ್ಸು.

**ಷಟ್ಚಕ್ರವರ್ತಿಗಳು**—ನಳ, ಹರಿಶ್ಚಂದ್ರ, ಸಗರ, ಪುರುಕುತ್ಸ, ಪುರೂರವ, ಕಾರ್ತವೀರ್ಯ

**ಷಟ್ಪದಿಗಳು**—(ಕನ್ನಡ ಛಂ.)ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ, ವಾರ್ಧಿಕ.

**ಷಟ್ಪ್ರತ್ಯಯ**—ಪ್ರಸ್ತಾರ, ನಷ್ಟ, ಉದ್ದಿಷ್ಟ, ಏಕದ್ವ್ಯಾದಿಲಗಕ್ರಿಯ, ಸಂಖ್ಯಾನ, ಅಧ್ವಯೋಗ. (ಛಂ.)

**ಷಟ್ಪ್ರಮಾಣ**—ಪ್ರತ್ಯಕ್ಷ, ಉಪಮಾನ, ಶಬ್ದ, ಅನುಮಾನ, ಅನುಪಲಬ್ಧಿ, ಅರ್ಥಾಪತ್ತಿ, (ದೃಷ್ಟ, ಶ್ರುತ) ಅದ್ವೈತಿ.

**ಷಟ್ಪ್ರಾಸ**—ಸಿಂಹ, ಗಜ, ಶರಭ, ಅಜ, ಹಯ, ವೃಷಭ. ಉಪಪ್ರಾಸ:-ವಿನುತ, ಶಾಂತ, ಸಮೀಪ, ಅಂತ, ಸುಪ್ರಾಸ, ಅನುಪ್ರಾಸ (ಛಂ)

**ಷಟ್ಯೋಗಾಂಗ**—ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ.

**ಷಟ್ಶಾಸ್ತ್ರ**—ಪೂರ್ವಮೀಮಾಂಸ, ಉತ್ತರಮೀಮಾಂಸ, ವೈಶೇಷಿಕ, ಭಾಟ್ಟ, ಪ್ರಭಾಕರ, ವೇದಾಂತ.

**ಷಟ್ಸ್ಥಲ**—(ಅಂಗಭೇದ)ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯಸ್ಥಲ, ಆಧಾರ:-ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಆತ್ಮ. ಉಪಾಸಕ ಭಕ್ತಿ:-ಸದ್ಭಕ್ತಿ, ನೈಷ್ಠಿಕಭಕ್ತಿ, ಅವಧಾನ, ಅನುಭಾವ, ಆನಂದ, ಸಮರಸಭಕ್ತಿ. ಲಕ್ಷಣ:-ಚಿತ್ತ, ಬುದ್ಧಿ, ನಿರಹಂಕಾರ, ಮನ. ಜ್ಞಾನ, ಭಾವ,ಹಸ್ತ.ಲಿಂಗಸ್ಥಲಭೇದ:-ಆಚಾರಲಿಂಗ, ಗುರುಲಿಂಗ ಶಿವಲಿಂಗ, ಚರ (ಜಂಗಮ) ಲಿಂಗ, ಪ್ರಸಾದ, ಮಹಾಲಿಂಗ. ಆಶ್ರಿತಶಕ್ತಿ:- ಕ್ರಿಯಾ, ಜ್ಞಾನ, ಇಚ್ಛಾ, ಆದಿ, ಪರಾ, ಚಿಚ್ಛಕ್ತಿ. ಧಾರಣಾಂಗ:-ನಾಸಿಕ, ಜಿಹ್ವಾ, ತ್ವಕ್, ದೃಕ್, ಶ್ರೋತ್ರ, ಹೃದಯ. (ಅಂಗಗಳು 44, ಲಿಂಗ 57 ವಿಧ. ಒಟ್ಟು ಏಕೋತ್ತರ ಸ್ಥಲ.)

ಷಟ್ಸಮಾಧಿ – ಅಭ್ಯಂತರ ದೃಶ್ಯಾನುವಿದ್ಧ, ಅಭ್ಯಂತರ ಶಬ್ದಾನುವಿದ್ಧ, ಅಭ್ಯಂತರನಿರ್ವಿಕಲ್ಪ ಬಾಹ್ಯದೃಶ್ಯಾನುವಿದ್ಧ, ಬಾಹ್ಯಶಬ್ದಾನುವಿದ್ಧ, ಬಾಹ್ಯನಿರ್ವಿಕಲ್ಪಕ.

ಷಟ್ಸಮಾಸ – ತತ್ಪುರುಷ, ಕರ್ಮಧಾರಯ, ದ್ವಿಗು, ದ್ವಂದ್ವ, ಬಹುವ್ರೀಹಿ, ಅವ್ಯಯೀಭಾವ, (ವ್ಯಾ.)

ಷಟ್ಸಾಧನಸಂಪತ್ತಿ – ಶಮ, ದಮ, ಉಪರತಿ, ತಿತಿಕ್ಷಾ, ಸಮಾಧಾನ, ಶ್ರದ್ಧಾ.

ಷಟ್ಸಾಮರ್ಥ್ಯ (ಪ್ರಯೋಗಗಳು) – ಮಾರಣ, ಮೋಹನ, ಸ್ತಂಭನ, ಉಚ್ಚಾಟನೆ, ಆಕರ್ಷಣ, ವಿದ್ವೇಷಣ (ಮಾಂತ್ರಿಕ.)

ಷಟ್ಕೋಶ – ಚರ್ಮ, ಮಾಂಸ, ರಕ್ತ, ಅಸ್ಥಿ, ಮಜ್ಜಾ, ರೋಮ (ನಾಡಿ)

ಷಟ್ ಋತು – ವಸಂತ, ಗ್ರೀಷ್ಮ, ವರ್ಷ, ಶರತ್, ಹೇಮಂತ, ಶಿಶಿರ.

ಷಡಗ್ನಿ – (1) ಗಾರ್ಹಪತ್ಯ, ಆಹವನೀಯ, ದಕ್ಷಿಣ, ಸಭ್ಯ, ಅವಸಥ್ಯ, ಔಪಾಸನಾಗ್ನಿ. (2) ಜಠರಾಗ್ನಿ, ವಡಭಾಗ್ನಿ, ದಾವಾಗ್ನಿ, ದಿವ್ಯಾಗ್ನಿ (ರವಿಮಂಡಲಸ್ಥಿತ), ಸಾಮಾನ್ಯಾಗ್ನಿ (ವ್ಯಕ್ತಾವ್ಯಕ್ತಭೇದ) ವಿದ್ಯುತ್.

ಷಡಭಿಜ್ಞಾ – ದಿವ್ಯದೃಷ್ಟಿ, ದಿವ್ಯಶ್ರುತಿ, ಪೂರ್ವಾನುಸ್ಮೃತಿ, ಪರೇಂಗಿತಜ್ಞಾನ, ಪರೋಕ್ಷವಿಷಯಜ್ಞಾನ, ಗಗನಗಮನಾದಿವಿದ್ಯಾಬುದ್ಧಿ.

ಷಡ್ದರ್ಶನ – ಸಾಂಖ್ಯ (ಕಪಿಲ), ಯೋಗ (ಪತಂಜಲಿ), ನ್ಯಾಯ (ಗೌತಮ), ವೈಶೇಷಿಕ (ಕಣಾದ) ಪೂರ್ವಮೀಮಾಂಸ (ಜೈಮಿನಿ) ಉತ್ತರಮೀಮಾಂಸ (ಬ್ರಹ್ಮಸೂತ್ರ) ಬಾದರಾಯಣ.

ಷಡ್ಯಜ್ಞ – ಅಗ್ನಿಹೋತ್ರ, ದರ್ಶಇಷ್ಟಿ, ಚಾತುರ್ಮಾಸ್ಯಇಷ್ಟಿ, ಆಗ್ರಹಾಯಣೇಷ್ಟಿ, ಅತಿಥಿಯಜ್ಞ, ವೈಶ್ವದೇವ.

ಷಡ್ದ್ರವ್ಯ – ಜೀವ, ಪುದ್ಗಲ, ಧರ್ಮ, ಅಧರ್ಮ, ಆಕಾಶ, ಕಾಲ.

ಷಡ್ಭ್ರಮೆ – ಕುಲ, ಗೋತ್ರ, ಜಾತಿ, ವರ್ಣ, ಆಶ್ರಮ, ರೂಪ.

ಷಡ್ರತಿ – (ಭಾವ) – ದಾಸ್ಯ, ಸಖ್ಯ, ವಾತ್ಸಲ್ಯ, ಶಾಂತ, ಕಾಂತ, ಅದ್ಭುತರತಿ. (ಇವು ಭಕ್ತಿಪೋಷಕ.)

ಷಡ್ರಸ – ಮಧುರ, ಆಮ್ಲ, ಕಟು, ತಿಕ್ತ, ಕಷಾಯ, ಲವಣ (ಸವಿ, ಹುಳಿ, ಕಾರ, ಕಹಿ ಒಗರು, ಉಪ್ಪು.)

ಷಡ್ವರ್ಣ – ಶ್ವೇತ, ಪೀತ, ಕಪಿಲ, ಹರಿತ, ಕೃಷ್ಣ, ಮಾಂಜಿಷ್ಠ.

ಷಡಾತತಾಯಿ – ಪರದ್ರವ್ಯಾಪಹಾರಿ, ಕ್ಷೇತ್ರಾಪಹಾರಿ, ಪರದಾರಾಪಹಾರಿ, ಹತಿಸಲುಬಂದ ಶಸ್ತ್ರಪಾಣಿ, ವಿಷಹಾಕುವವ, ಮನೆಗೆಬೆಂಕಿಯಿಡುವವ.

ಷಡ್ಭಾಷಾ – ಸಂಸ್ಕೃತ, ಪ್ರಾಕೃತ, ಮಾಲವ, ಮಾಗಧಿ, ರಾಕ್ಷಸ. ಪೈಶಾಚಿ.

ಷಡಿಂದ್ರಿಯ – ಮನಸ್ಸು, ಶ್ರೋತ್ರಾದಿಪಂಚಕ. ಅರಿವಿಗೆ:- ಜ್ಞಾನ, ವಿಷಯಪಂಚಕ.

**ಷಡ್ವಿಕಾರ**— ಸತ್ತಾ, ಉತ್ಪತ್ತಿ, ವೃದ್ಧಿ; ವಿಪರಿಣಾಮ, ಅಪೇಕ್ಷಾ, ನಾಶ. ಷಡ್ಭಾವವಿಕಾರಃ- ಅಸಕ್ತಿ, ಉತ್ಪನ್ನ, ವರ್ಧನ, ಪರಿವರ್ತನ, ಘಟನಾ, ನಾಶ,

**ಷಡ್ವಿಧಕರ್ಣಾಟಕೀಯವೃತ್ತಗಳು**— ಶಾರ್ದೂಲ, ಮತ್ತೇಭವಿಕ್ರೀಡಿತ, ಚಂಪಕಮಾಲೆ ಉತ್ಪಲಮಾಲೆ, ಸ್ರಗ್ಧರಾ, ಮಹಾಸ್ರಗ್ಧರಾವೃತ್ತ. (ಛಂ)

**ಷಡ್ವಿಧಧರ್ಮಭಿಕ್ಷುಗಳು**— ಪಥಿಕ, ನಿರಾಧಾರಿ, ವಿದ್ಯಾರ್ಥಿ, ಗುರುಪೋಷಕ, ಸನ್ಯಾಸಿ, ಬ್ರಹ್ಮಚಾರಿ.

**ಷಡ್ವಿಧದಾನಾಧಿಷ್ಠಾನ**—ಧರ್ಮ, ಅರ್ಥ, ಕಾಮ, ಲಜ್ಜಾ, ಭಯ,ಹರ್ಷ. ಅಂಗಗಳುಃ- ಧ್ರುವ, ತ್ರಿಕ, ಕಾಮ್ಯ, ಕಾಲಾಪೇಕ್ಷ, ಕ್ರಿಯಾಪೇಕ್ಷ, ಗುಣಾಪೇಕ್ಷ.

**ಷಡ್ವಿಧರಾಜಧರ್ಮಗುಣ**— ವ್ಯಾಖ್ಯಾನಶಕ್ತಿ, ವೀರತ್ವ, ಮೇಧಾಶಕ್ತಿ, ಪರಿಣಾಮದರ್ಶಿತಾ, ನೀತಿನೈಪುಣ್ಯ. ಕರ್ತವ್ಯಾಕರ್ತವ್ಯವಿವೇಕ. ಅನರ್ಥಕಾರೀಷಡ್ದೋಷಃ- ನಿದ್ರೆ, ಆಲಸ್ಯ, ಭಯ, ಆಮರ್ಷ, ಮಾರ್ದವ, ದೀರ್ಘಸೂತ್ರತೆ.

**ಷಡ್ವಿಧಸನ್ಯಾಸೀಭೇದ**—1 ಕುಟೀಚಕ, 2 ಬಹೂದಕ, 3 ಹಂಸ, 4 ಪರಮಹಂಸ, 5 ತುರಿಯಾತೀತ, 6 ಅವಧೂತ. ಆಚ್ಛಾದನಃ-ದಿವವ್ಯಸ್ತ್ರ,ಏಕವಸ್ತ್ರ,ಮೃಗಚರ್ಮಾಂಬರ ದಿಗಂಬರ (ವಾ ಕೌಪೀನ) 5-6ದಿಗಂಬರ. ಅಧಿಕಾರಃ-1-2 ಜಪ ಮಂತ್ರ, 3-4 ಧ್ಯಾನ 5-6 ಸ್ವರೂಪಾನುಸಂಧಾನ. ಸ್ನಾನಃ-ತ್ರಿಕಾಲ, ದ್ವಿಕಾಲ- ಏಕಸ್ನಾನ, ಮಾನಸ, ಭಸ್ಮ, ವಾಯವ್ಯಸ್ನಾನ. ಧಾರಣಃ- 1-3 ಊರ್ಧ್ವಪುಂಡ್ರ 2 ತ್ರಿಪುಂಡ್ರ, ವಿಭೂತಿ, ತಿಲಕ, ಇಲ್ಲ

**ಷಡ್ವಿಧಗೃಹಸ್ಥಭೇದ**— ವಾರ್ತಿಕ, ಶಾಲೀನ, ಯಾಯಾವರ, ಘೋರ ಸನ್ಯಾಸಿಕ, ಉಂಛವೃತ್ತಿ, ಅಯಾಚಕ.

**ಷಡ್ವಿಧಶಕ್ತಿ**—ಚಿಚ್ಛಕ್ತಿ, (ಶುದ್ಧ) ಪರಾ, ಅನಾದಿ, ಇಚ್ಛಾ(ವಿದ್ಯೆ) ಜ್ಞಾನಶಕ್ತಿ, (ಪ್ರತಿಷ್ಠೆ) ಕ್ರಿಯಾಶಕ್ತಿ, (ವೀ.ಶೈ.) ವಿಷ್ಣುಶಕ್ತಿಗಳುಃ-ಆಹ್ಲಾದಿನಿ, ಸಂಧಿನಿ, ಜ್ಞಾನ,ಇಚ್ಛಾ, ಕ್ರಿಯಾ, ಲೀಲಾಶಕ್ತಿ,

**ಷಡ್ವಿಧ ಹಾವ-ಭಾವ**— ವಿಲಾಸ, ವಿಭ್ರಮ, ಲಲಿತ, ಬಿಬ್ಬೋಕ, ಹೇಲಾ, ಲೀಲಾ.

**ಷಡ್ವಿಧಹಾಸ**— ಸ್ಮಿತ, ಹಸಿತ, ವಿಹಸಿತ, ಅಪಹಸಿತ, ಉಪಹಸಿತ, ಅತಿಹಸಿತ.

**ಷಡ್ವಿಧಾನ್ನ**— ಭಕ್ಷ, ಭೋಜ್ಯ, ಲೇಹ್ಯ, ಚೋಷ್ಯ, ಪಿಚ್ಛಲ (ಖಾದ್ಯ) ಪಾನೀಯ.

**ಷಡ್ವಿಮಾನಾಚಾರ್ಯರು**— ಗಾರ್ಗ, ಶೌನಕ. ವಾಚಸ್ಪತಿ, ನಾರಾಯಣ, ಚಾಕ್ರಾಯಣಿ ದಂಡಿನಾಥ (ವಿಶ್ವನಾಥ.)

**ಷಡ್ವಿಸರ್ಗ**— ಪ್ರತಿಭಾ, ಶ್ರವಣ, ವಾರ್ತೆ, ದರ್ಶನ, ಆಸ್ವಾದನ,. ಆಘ್ರಾಣ.

**ಷಡೀತಿಭಾಧೆ**— ಅತಿವೃಷ್ಟಿ, ಅನಾವೃಷ್ಟಿ ,ರಾಜೋಪದ್ರವ, ಮೂಷಕಾದಿಜೀವಿಗಳ, ಶಲಭಾದಿಕೀಟಗಳ, ಗಿಳಿಇತ್ಯಾದಿಪಕ್ಷಿಗಳಕಾಟ.

**ಷಡ್ರೀತಿ**— ಗೌಢಿ, ವೈದರ್ಭಿ, ಪಾಂಚಾಲಿ, ಲಾಟಿ, ಅವಂತಿ, ಮಾಗಧಿ (ಸಾಹಿತ್ಯಕ.)

**ಷಡ್ಗುಣ**— 1 ಸಂಧಿ (ಕೋಶಹೇತು, ದಂಡಪ್ರಧಾನ; ಭೂಮಿಪ್ರಧಾನ ಹೇತುಕ); ವಿಗ್ರ

ಹ; (ಪ್ರಕಾಶ; ಕೂಟ; ಪಾರ್ಷ್ಣಿ; -3ವಿಧ). ಯಾನ (ವಿಗ್ರಹ್ಯ, ಸಂದಾನ, ಪ್ರಸಂಗ, ಭೂಯ, ಉಪೇಕ್ಷ್ಯಯಾನ). ಆಸನ, ದ್ವೈಧೀಭಾವ, ಸಮಾಶ್ರಯ. 2 ರಾಜಧರ್ಮ:- ಜ್ಞಾನ, ಶಕ್ತಿ, ಬಲ, ತೇಜ, ವೀರ್ಯ, ಐಶ್ವರ್ಯ 3 ಕ್ಷಿಪ್ರ:-ಉಗ್ರ, ತೀಕ್ಷ್ಣ, ಸ್ಥಿರ, ಮೃದು, ಚರ, (ಜ್ಯೋ)

**ಷಡ್ಗುಣೈಶ್ವರ್ಯ**—(ಭಗವತ್ಪರ) :-ಸರ್ವ-ಕರ್ತೃತ್ವ, ವ್ಯಾಪಕತ್ವ, ನಿಯಾಮಕತ್ವ, ಶಕ್ತತ್ವ, ಸರ್ವಾತ್ಮಕತ್ವ, ಸರ್ವಜ್ಞತ್ವ. ಪೂರ್ಣೈಶ್ವರ್ಯಗಳು (ಭಗ):- ಪರಿಪೂರ್ಣ-ಐಶ್ವರ್ಯ, ಧರ್ಮ, ಯಶ, ಶ್ರೀ, ಜ್ಞಾನ, ವೈರಾಗ್ಯ.

**ಷಡಂಗ**— 1 ಶಿಕ್ಷಾ (ಪಾಠ ಉಪದೇಶ) ವ್ಯಾಕರಣ, ಛಂದಸ್ಸು. ಕಲ್ಪ(ಯಜ್ಞಾದಿಜ್ಞಾನ, ಶ್ರೌತ, ಸ್ಮಾರ್ತ), ನಿರುಕ್ತ (ಶಬ್ದಾರ್ಥನಿರ್ಣಯ)ಜ್ಯೋತಿಷ್ಯ. ಉತ್ಪನ್ನಸ್ಥಾನ :- ಘ್ರಾಣ, ಮುಖ, ಪಾದ, ಹಸ್ತ, ನೇತ್ರ,ಶ್ರೋತ್ರ. ಶರಣಾಗತಿಪ್ರಧಾನ (ಪ್ರಾಪತ್ತಿಕ),ಅನುಕೂಲ್ಯ-ಸಂಕಲ್ಪ. ಪ್ರಾತಿಕೂಲ್ಯವರ್ಜನ, ದೇವವಿಶ್ವಾಸ, ಶರಣ್ಯಪ್ರಾರ್ಥನೆ, ಆತ್ಮ ನಿಕ್ಷೇಪ, ಕಾರ್ಪಣ್ಯ. 3 ದಾನಷಡಂಗ:- ದಾತ, ಪ್ರತಿಗೃಹೀತ, ಶುದ್ಧಿ, ದೇಯಸಾಧನ, ದೇಶ, ಕಾಲ. 4 ಚಿತ್ರಕಲಾಷಡಂಗ:-ರೂಪ, ಪ್ರಮಾಣ, ಭಾವ (ಲಾವಣ್ಯ) ಯೋಜನಾ, ಸಾದೃಶ್ಯ, ವರ್ಣಿತ, ಭಂಗರಚನಾ ಕೌಶಲ.

**ಷಡಂಗಧೂಪ**— ಅಗರು, ಗುಗ್ಗುಲ, ಮಧು, ಚಂದನ, ಆಜ್ಯ, ಸಿತ.

**ಷಡಂಗನ್ಯಾಸ**— ಚರಣ, ಜಾನು, ಕಟಿ, ನಾಭಿ, ಹೃದಯ, ಶಿರ.

**ಷಡ್ದುರ್ಗ**—ಗಿರಿದುರ್ಗ, ವನದುರ್ಗ, ಮೃದ್ದುರ್ಗ, ಮಾನವದುರ್ಗ, ಮಹೀದುರ್ಗ, ಧನ್ವದುರ್ಗ.

**ಷಡೂರ್ಮಿ**—1 ಕ್ಷುತ್, 2 ಪಿಪಾಸೆ, 3 ಶೋಕ, 4 ಮೋಹ, 5 ಜರಾ, 6 ಮೃತಿ, ಧರ್ಮ 1-2 ಪ್ರಾಣ ಧರ್ಮ, 3- 4 ಮನೋಧರ್ಮ, 5-6 ದೇಹಧರ್ಮ.

**ಷಣ್ಮತ**—ಶೈವ, ವೈಷ್ಣವ, ಸೌರ, ಗಾಣಾಪತ್ಯ, ಕಾಪಾಲಿಕ, ಶಾಕ್ತೇಯ.

**ಷಷ್ಠಾಚಾರ**—ವೇದ, ವೈಷ್ಣವ, ಶೈವ, ದಕ್ಷಿಣ, ವಾಮ, ಕುಲ-ಸಿದ್ಧಾಂತ(ಶಕ್ತಿ-ದ).

**ಷಡ್ದೇವಿಯರು**—(ದೇವೀರೂಪ) ನಂದ, ರಕ್ತದಂತಿಕೆ, ಶಾಕಂಭರಿ, ದುರ್ಗೆ, ಭೀಮೆ, ಭ್ರಮರಿ.

**ಷಡ್ದೋಷ**—(ಬೌದ್ಧಿಕ) ಕಾಮ, ಕ್ರೋಧ, ಲೋಭ, ಭಯ, ದೈನ್ಯ, ಕೌಟಿಲ್ಯ.

**ಅರಿಷಡ್ವರ್ಗ**—(ಷಡ್ವೈರಿಗಳಿವು)ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ. ಷಡ್ವರ್ಗ:-ಬಲರಾಶಿ, ಹೋರಾ, ದ್ರೇಕ್ಕಾಣ,ತ್ರಿಂಶಾಂಶ,ನವಾಂಶ, ದ್ವಾದಶಾಂಶ, (ಜ್ಯೋ)

**ಅಂಗುಲೀಕ್ರಿಯಾಕರಣ**— ಪ್ರಮುಕ್ತಿ, ಛದ್ರಮುಕ್ತಿ ಯುಕ್ತಿ ಸಂಸ್ಥಾನ, ಸುಖರತೆ, ಅಂಗುಲೀಪ್ರಸಾರಣೆ (ವಂಶೀವಾದ್ಯಾಯತ್ತ). ಶೀತ್ಕಾರಭೇಧಗಳು:-ಬಾಹುಳ್ಯ, ಸ್ವಸ್ಥಿತಿ, ವಿಸ್ವರ, ಲಘುಸ್ವರ ಸ್ಫುಟಸ್ವರ, ಪಾರುಷ್ಯ.

**ಸಿದ್ಧಾಂತೋಪಯುಕ್ತಾಂಗ**— ಉಪಕ್ರಮೋಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ, ಉಪಪತ್ತಿ.

**ಸಪ್ತಕಾಂಡಗಳು**—ಬಾಲ, ಅಯೋಧ್ಯಾ, ಅರಣ್ಯ, ಕಿಷ್ಕಿಂಧ, ಸುಂದರ, ಯುದ್ಧ, ಉತ್ತರ ಕಾಂಡ (ರಾಮಾಯಣ).

**ಸಪ್ತಕುಲಾಚಲ**—ಮಲಯ, ಮಹೇಂದ್ರ, ಸಹ್ಯ, ಋಕ್ಷ, ವಿಂಧ್ಯ, ಶುಕ್ತಿಮಂತ, ಪಾರಿಯಾತ್ರ (ಭಾರತದಲ್ಲಿವೆ.)

**ಸಪ್ತಕುಲಶೈಲ**— ಹಿಮವಾನ್, ಹೇಮಕೂಟ, ಮೇರು,ನಿಷಧ, ನೀಲ, ಶ್ವೇತ, ಶೃಂಗ (ವರ್ಷಪರ್ವತಗಳಿವು).

**ಸಪ್ತಕುಶ**—ಕುಶ, ಕಾಶ, ದೂರ್ವ, ಯವಪತ್ರ, ವ್ರೀಹಿಪತ್ರ, ಬಲ್ವಜ, ಕಮಲ.

**ಸಪ್ತಕ್ಷೇತ್ರ** — 1 ಅಯೋಧ್ಯೆ, ಮಥುರೆ, ಮಾಯಾ (ಹರಿದ್ವಾರ) ಕಾಶಿ, ಕಾಂಚಿ, ಅವಂತಿ, ದ್ವಾರಾವತಿ. 2 ತೆಂಕನಾಡಿನಲ್ಲಿ—ಕುಮಾರಾದ್ರಿ, ರಜತಪೀಠ, ಕುಡುಮ; ಧ್ವಜೇಶ್ವರ (ಕೋಟೇಶ್ವರ), ಕ್ರೋಢ (ಶಂಕರನಾರಾಯಣ), ಮೂಕಾಂಬಾ (ಕೊಲ್ಲೂರು) ಗೋಕರ್ಣ.

**ಸಪ್ತಗುಣ**— ಭಕ್ತಿ, ಪ್ರೇಮ, ದಯೆ, ಔದಾರ್ಯ, ಶಕ್ತಿ. ಕ್ಷಮಾ, ಜ್ಞಾನ, (ಜೈ).

**ಸಪ್ತಗಂಗಾ**—ಜಾಹ್ನವಿ, ವೃದ್ಧಗಂಗಾ (ಗೋದಾವರಿ), ಕಾಳಿಂದಿ, ಸರಸ್ವತಿ, ನರ್ಮದೆ, ವೇಣಿ, ಕಾವೇರಿ. ಗಂಗಾಸಪ್ತಶಾಖೆಗಳು:-ಗಂಗಾ, ಯಮುನಾ, ಗೋಮತಿ, ಗೋಗ್ರ, (ಸರಯು) ಗಂಡಕಿ, ಕೌಶಿಕ, ಶೋಣ (ನಾಮಾಂತರ ಹ್ಲಾದನಿ, ಪ್ಲಾವನಿ, ನಳಿನಿ, ಸುಚಕ್ಷು, ಸೀತೆ, ಭಾಗೀರಥಿ, ಸಿಂಧು.)

**ಸಪ್ತಜನಪದ**— ಭರತ, ಹೈಮವತ, ಹರಿವರ್ಷ, ವಿದೇಹ, ರಮ್ಯಕ, ಹೈರಣ್ಯ, ಐರಾವತ. ಆಳುವರಾಜವಂಶ:- ಕುರು ಹರಿ, ನಾಥ, ಉಗ್ರವಂಶ (ಜೈ. ಪು).

**ಸಪ್ತತತ್ವ**—ಶುದ್ಧ, -ಮುಕ್ತಸ್ವರೂಪ-ಬ್ರಹ್ಮ, ಈಶ್ವರಚೈತನ್ಯ, ಜೀವಚೈತನ್ಯ, ಪ್ರಮಾತಾ (ಜ್ಞಾತೃ) ಪ್ರಮೇಯ, ಫಲ (ಕಠರುದ್ರ-ಉ) 2 ದ್ರವ್ಯ (9 ವಿಧ)ಗುಣ (24 ವಿಧ)ಕರ್ಮ (5ವಿಧ) ಸಾಮಾನ್ಯ, ವಿಶೇಷ, ಸಮವಾಯ, ಅಭಾವ, (ವೈಶೇಷಿಕ—ದ).

**ಸಪ್ತತತ್ವ**—(ಪದಾರ್ಥ)1 ಜೀವ, 2 ಅಜೀವ, 3 ಆಸ್ರವ(ಪುಣ್ಯ ಪಾಪವಿಭೇದ) 4 ಬಂಧ 5 ಸಂವರ (ಇಂದ್ರಿಯಕಷಾಯಗಳನ್ನು ಮುಚ್ಚುವುದು) 6 ನಿರ್ಜರಾ, ಮೋಕ್ಷ (ಬಂಧ ನಿರ್ಮೂಲನ)(ಜೈ. ಪು.)

**ಸಪ್ತತಾಳ**—ಧ್ರುವ, ಮಟ್ಟೆ, ರೂಪಕ; ಝಂಪೆ. ತ್ರಿಪುಟ, ಅಷ್ಟ,ಆದಿ(ಏಕ) ಜಾತಿಭೇದ:- ತ್ರಿಸ್ರ, ಚತಸ್ರ, ಮಿಶ್ರ, ಖಂಡ, ಸಂಕೀರ್ಣ,. (ತಾಳವೆಂದರೆ ಯಥಾನುಗತಕ್ರಿಯಾಪ್ರಮಾಣ).

**ಸಪ್ತದ್ವೀಪ**— ಜಂಬು (ಸುದರ್ಶನ), ಪ್ಲಕ್ಷ (ಗೋಮೇಧ) ಕುಶ, ಕ್ರೌಂಚ,ಶಾಕ, ಶಾಲ್ಮಲಿ

ಪುಷ್ಕರ. ಇಲ್ಲಿ ಮೊತ್ತಮೊದಲಾಳಿದರಾಜರು—ಅಗ್ನೀಧ್ರ, ಇದ್ಮಜಿಹ್ವ, ಹಿರಣ್ಯರೇತ ಘೃತಪೃಷ್ಟ, ಮೇಧಾತಿಥಿ, ಯಜ್ಞಬಾಹು, ವೀತಿಹೋತ್ರ. ದೇವರು–ನಾರಾಯಣ, ರವಿ ಅಗ್ನಿ, ವರುಣ, ಚಂದ್ರ, ವಾಯು, ಮುಕ್ತಿ.

**ಸಪ್ತಧಾತು**—ರಸ, ರುಧಿರ, ಮಾಂಸ, ಮೇಧಸ್ಸು, ಅಸ್ಥಿ, ಮಜ್ಜಾ, ಶುಕ್ರ. ಇವುಗ ಮೂಲ–ಪೃಥ್ವಿ, ನೀರು, ಬೆಂಕಿ, ಗಾಳಿ, ಆಕಾಶ, ಸೂರ್ಯ, ಚಂದ್ರ. ವರ್ಣಗಳು:- ಕಪಿಲ, ನೀಲ, ಲೋಹಿತ, ಮಾಂಜಿಷ್ಠ, ಕೃಷ್ಣ, ತಮ, ಶ್ವೇತ.

**ಸಪ್ತನಾರಕ**—(ದುಷ್ಕೃತಿಗಳಅನುಭವಭೂಮಿ) ರೌರವ, ಮಹಾರೌರವ, ವಹ್ನಿ, ವೈತರ ಕುಂಭೀ, ತಾಮಿಸ್ರ, ಅಂಧತಾಮಿಸ್ರ.

**ಸಪ್ತನಾರಕಪಟಲ**— (ಜೈ.-ಪು.) ಘರ್ಮೆ (ರತ್ನಪ್ರಭೆ) ವಂಶಿ (ಶರ್ಕರಾಪ್ರಭೆ) ಶೈ (ವಾಳುಕಾಪ್ರಭೆ) ಅಂಜನೆ (ಪಂಕಪ್ರಭೆ) ಅರಿಷ್ಟೆ (ಧೂಮಪ್ರಭೆ) ಮಘವಿ(ತಮಃಪ್ರಭೆ ಮಹಾಮಘವಿ (ಮಹಾತಮಃಪ್ರಭೆ)

**ಸಪ್ತಪದಿ**—ಇಚ್ಛಾಪೂರ್ತಿ, ಶಕ್ತಿಸಂಗ್ರಹ, ಗಾರ್ಹಸ್ಥ್ಯರಕ್ಷೆ, ಅನ್ಯೋನ್ಯಮೈತ್ರಿ, ಪಶುಧ ಪ್ರಾಪ್ತಿ, ಯಜ್ಞಫಲಾವಾಪ್ತಿ; ಇವುದೊರಕುವಂತೆ ದೇವತೆಗಳನ್ನು ಪ್ರಾರ್ಥಿಸುತ್ತ ವಧೂವರರು ವಿವಾಹದವೇಳೆ ಯಜ್ಞೇಶ್ವರನಿಗೆ ಪ್ರದಕ್ಷಿಣೆಬರುವಕ್ರಮ.

**ಸಪ್ತಪರಮಸ್ಥಾನ**—ಸಜ್ಜಾತಿ, ಸದ್ಗೃಹಸ್ಥ, ಪರಿವ್ರಾಜ್ಯ, ಸುರೇಂದ್ರತ್ವ, ಸಾಮ್ರಾಜ್ಯತ್ವ ಪರಮಾರ್ಹತ್ವ, ಪರಿನಿರ್ವಾಣ. (ಜೈ.-ಪು.)

**ಸಪ್ತಫಲಪ್ರಾಪ್ತಿ ಹೇತುಗಳು**— ಜಾತಿ, ಆಯು, ಭೋಗ, ಪ್ರಕೃತಿ, ಪ್ರವೃತ್ತಿ, ಶಕ್ತಿ ಸಂಸ್ಕಾರ (ಶುಭಾಶುಭ ಭುಕ್ತಿಕಾರಣಗಳಿವು)

**ಸಪ್ತಪಾತಾಳ**—(ಬಿಲಸ್ವರ್ಗ) ಅತಳ, ವಿತಳ. ಸುತಳ, ತಳಾತಳ, ರಸಾತಳ, ಮಹಾತಳ ಪಾತಾಳ. ವರ್ಣಚ್ಛಾಯೆ—ನೀಲ, ನಿರ್ಮಲ, ಪ್ರವಾಳ, ಹೈಮ, ಪದ್ಮ, ಶುಭ್ರ ಸ್ವರ್ಣಚ್ಛಾಯೆ. ದೇವರು—ಮಹಾದೇವ (ಶ್ರೀಕಂಠ) ಹಾಟಕೇಶ್ವರ, ಉಮಾಪತಿ ನೀಲಕಂಠ, ಶಂಭು, ಶಂಕರ, ಭೂತನಾಥ. ಅಧಿಪತಿಗಳು—ಬಲ-ನಮುಚಿ; ಶಂ ಪಾಲಾದಿ; ಜಂಭ-ಬಕಾದಿಗಳು; ತಾರಕ-ಪ್ರಹ್ಲಾದ; ಮಯ-ಕಾಲನೇಮಿ (ದೈತ್ಯರು) ಕರ್ಕೋಟಕ; ವಾಸುಕಿ-ಸುಪರ್ಣ; ಹಿರಣ್ಯಾಕ್ಷ-ನರಕಾಸುರ; ಬಲಿ-ಮುಚುಕುಂದ ಶೇಷ. ಭೂಮಿ—3ಜಲಮಯ; 3ಅಗ್ನಿಮಯ;ಪಾತಾಳ-ಪ್ರಾಣಾಗ್ನಿಮಯ.(ಜೈ.-ಪು. ಮೃತ್ತಿಕೆ, ವಾಲುಕೆ, ಲೋಹ, ಕಾಂಸ್ಯ, ತಾಮ್ರ, ರಜತ, ಸುವರ್ಣಮಯ).

**ಸಪ್ತಪ್ರಕೃತಿ**—(ಸಪ್ತಾಂಗಬಲ) ದೇಶ, ಕೋಶ, ಸೇನೆ, ದುರ್ಗ, ಮಿತ್ರ(ಸಾಮಂತ) ಅಮಾತ್ಯ, ಸ್ವಾಮಿ (ರಾಜ).

**ಸಪ್ತಭೂಮಿಕೆಗಳು**-(ಮೋಕ್ಷಮಾರ್ಗ) ಸುಖೇಚ್ಛಾ,ವಿಚಾರಣಾ,ತನುಮಾನಸಿ,ಸತ್ವಾಪತ್ತಿ ಸಂಸಕ್ತಿ,ಪದಾರ್ಥಭಾವನಾ,ತೂರ್ಯಗಾಮಿ(ಮುಂದೆತೂರ್ಯಾವಸ್ಥೆ).ಸಿದ್ಧಾಂತವಾದ

**ಸಪ್ತಮದ**—(1) ಕುಲ, ಧನ, ಯೌವನ, ಶ್ರೀ, ವಿದ್ಯೆ, ಅನ್ನ, ಉದ್ಯೋಗ. (2) ವಾತಜ, ಪಿತ್ತಜ, ಕಫಜ, ಸನ್ನಿಪಾತಕ, ರಕ್ತ, ಮದ್ಯ, ವಿಷಮದ. (ಆಯುರ್ವೇದೀಯ).

**ಸಪ್ತಮಾತೃಕೆಯರು**—ಬ್ರಾಹ್ಮೀ, ಮಾಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಾ.

**ಸಪ್ತಮಾರುತ**— 1 ಗಗನ, 2 ಸ್ಪರ್ಶನ, 3 ವಾಯು, 4 ಅನಿಲ, 5 ಪ್ರಾಣ, 6 ಪ್ರಾಣೇಶ್ವರ, 7 ಜೀವ. ಸುತ್ತುವಲೋಕ- 1 ಬ್ರಹ್ಮಲೋಕ, 2 ಇಂದ್ರಲೋಕ, 3 ಅಂತರಿಕ್ಷ, (4-7) ಚತುರ್ವರ್ಗ(ವಿಷ್ಣು- ಪು. ಪ್ರಕಾರ-ಆವಹ, ಪ್ರವಹ, ಸಂವಹ, ಉದ್ವಹ, ನಿವಹ, ಪರಿವಹ, ಪರಾವಹ).

**ಸಪ್ತಮಾತ್ರಾತ್ಮಾ**—(ಅರ್ಧ ಪ್ರಣವ). ಅಕಾರ, ಉಕಾರ, ಮಕಾರ, ಬಿಂದು, ನಾದ, ಕಲಾ, ಕಲಾತೀತ. (ಉಪಾಸ್ಯಮಾನ).

**ಸಪ್ತರಕ್ತ**—ಪಾಣಿತಲ, ಪಾದತಲ, ನೇತ್ರಾಂತರ, ನಖಮೂಲ, ತಾಲು, ಅಧರ, ಜಿಹ್ವಾ,

**ಸಪ್ತರೂಪ**—ಶುಕ್ಲ, ರಕ್ತ, ಕೃಷ್ಣ, ಧೂಮ, ಪೀತ, ಕಪಿಲ, ಪಾಂಡುರ.

**ಸಪ್ತರ್ಧಿ**—ಬುದ್ಧಿ, ತಪ, ವಿಕ್ರಿಯಾ, ಔಷಧಿ, ರಸ, ಬಲ, ಅಕ್ಷೀಣ. (ಜೈ.)

**ಸಪ್ತರ್ಷಿ**— 1 ಮರೀಚಿ, ಅತ್ರಿ, ಪುಲಹ, ಪುಲಸ್ತ್ಯ, ಕ್ರತು, ಅಂಗಿರಾ, ವಸಿಷ್ಠ. ದೇವಿಯರು:-ಸಂಭೂತಿ, ಅನಸೂಯೆ, ಕ್ಷಮಾ, ಪ್ರೀತಿ, ಸನ್ನತಿ, ಸ್ಮೃತಿ, ಅರುಂಧತಿ, (ಪ್ರಥಮಮನ್ವಂತರ,) 2 ಅತ್ರಿ, ವಸಿಷ್ಠ, ಕಶ್ಯಪ, ಗೌತಮ, ಭರದ್ವಾಜ, ಜಮದಗ್ನಿ, ವಿಶ್ವಾಮಿತ್ರ. (ವೈವಸ್ವತಮನ್ವಂತರ).

**ಸಪ್ತಲೋಕ**—ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕ. (ನಿವಾಸ:-ಮಾನವ, ಆದಿತ್ಯ, ತಾರಾಗ್ರಹ, ಮಾರ್ಕಂಡೇಯಾದಿ, ಸನಕಾದಿ ಸಿದ್ಧರು, ವಿಷ್ಣು, ಬ್ರಹ್ಮ.

**ಸಪ್ತವಾರ**—ಆದಿತ್ಯ, ಚಂದ್ರ, ಮಂಗಳ, ಬುಧ, ಗುರು, ಶುಕ್ರ, ಮಂದವಾರ.

**ಸಪ್ತವಿಧಅರ್ಥವಿಶೇಷ**—ಅರ್ಥ, ವಾಚ್ಯಾರ್ಥ, ಭಾವಾರ್ಥ, ಸಂಪ್ರದಾನಾರ್ಥ, ಕೌಲಿಕಾರ್ಥ, ರಹಸ್ಯಾರ್ಥ, ತತ್ವಾರ್ಥ. (ವ್ಯಾ)

**ಸಪ್ತವಿಧನಖೋಪಕ್ಷತ** — ವಂಚನಖಯೋಗ: ದ್ವಂದ್ವಯೋಗ, ಚಂದ್ರ, ಮಂಡಲ, ಮಯೂರಪ್ಲುತ, ಶಶಪ್ಲುತ, ಉತ್ಪಲ.

**ಸಪ್ತವಿಧಪರಾಪ್ರಕೃತಿರೂಪ**—ಗಾಯತ್ರಿ, ವಾಗ್ದೇವಿ, ಲಕ್ಷ್ಮೀ, ಉಮಾ (ಜ್ಞಾನದಾಯಿ) ಶಕ್ತಿ, ಬೀಜ(ಮೋಹಕಾರಿಣಿ), ತಪಸ್ವಿನಿ(ತಪೋಧಿಷ್ಠಾತ್ರಿ), ಧರ್ಮವ್ರತಾ (ಪ್ರತಿಷ್ಠಾತ್ರಿ)

**ಸಪ್ತವಿಧಮೋಹ**— (ಅಜ್ಞಾನಸೋಪಾನ) ಪ್ರಥಮಬೀಜ- ಜಾಗ್ರದವಸ್ಥಾ, ದ್ವಿತೀಯ ಜಾಗ್ರತಾವಸ್ಥಾ, ತೃತೀಯಜಾಗ್ರದವಸ್ಥಾ, ಜಾಗ್ರತ್ ಸ್ವಪ್ನಾವಸ್ಥಾ, ಸ್ವಪ್ನಾವಸ್ಥಾ, ಸ್ವಪ್ನಜಾಗ್ರತ್, ಸುಪುಪ್ತ್ಯವಸ್ಥಾ.

**ಸಪ್ತವಿಭಕ್ತಿಗಳು**—ಕರ್ತೃ, ಕರ್ಮ, ಕರಣ, ಸಂಪ್ರದಾನ, ಅಪಾದಾನ. ಸಂಬಂಧ, ಅಧಿಕರಣ; (ವ್ಯಾ)

**ಸಪ್ತವ್ಯಸನ**—(ಚಾಳಿ) ದ್ಯೂತ, ಮೃಗಯೆ, ಸುರಾಪಾನ; ವ್ಯಭಿಚಾರ, ಅರ್ಥ, ಪರನಿಂದೆ (ವಾಗ್ದೋಷ) ದಂಡಪಾರುಷ್ಯ, 2 ತನು, ಮನ, ಧನ, ಯುವ್ವನ, ವಸನ, ರಾಜ್ಯ, ಪಿತ್ರ ವ್ಯಸನ (ಕ್ರೈ)

**ಸಪ್ತಸಮುದ್ರ**—ಲವಣ; ಇಕ್ಷು, ಸುರಾ, ಸರ್ಪಿ (ಘೃತೋದ), ದಧಿ, ಕ್ಷೀರ, ಶುದ್ಧೋದಕ,

**ಸಪ್ತಸಪ್ತವಿಧತಾಬ್ರಹ್ಮಾಂಡ**—ಸಪ್ತಲೋಕ, ಸಪ್ತಪಾತಾಳ, ಸಪ್ತಸಮುದ್ರ, ಸಪ್ತದ್ವೀಪ, ಸಪ್ತಾಕಾಶ, ಸಪ್ತಮಾರುತ, ಸಪ್ತಾವರಣ, (ಇವುಗಳಿಂದಕೂಡಿದುದು.)

**ಸಪ್ತಸಾರಸ್ವತ** — ವಿಶಾಲ, ಮನೋರಮೆ, ಸುರೇಣು, ವಿಮಲೋದಕ, ಓಘವತಿ, ಸುಪ್ರಭಾ, ಕಾಂಚನಾಕ್ಷಿ. (ರಾಮಾಯಣ).

**ಸಪ್ತಸಿದ್ಧಾಂತ**—ಪಾತಂಜಲಿ, ಕಾಪಿಲ, ಅಪಾಂತರತಮ, ಬ್ರಹ್ಮಿಷ್ಠ, ಪಾಶುಪತ, ಹೈರಣ್ಯಗರ್ಭ, ಶೈವ.

**ಸಪ್ತಸೋಮಯಜ್ಞಸಂಸ್ಥಾ**—ಅಗ್ನಿಷ್ಟೋಮ, ಅತ್ಯಗ್ನಿಷ್ಟೋಮ, ಉಕ್ಥ, ಷೋಡಶಿ, ವಾಜಪೇಯ, ಅತಿರಾತ್ರ, ಅಪ್ತೋರ್ಯಾಮ. ಪಾಕಯಜ್ಞಸಂಸ್ಥಾ:- ಹುತ, ಪ್ರಹುತ, ಆಹುತ, ಶೂಲಗವ, ಪ್ರತ್ಯವರೋಹಣ, ಬಲಿಹರಣ, ಅಷ್ಟಕಹೋಮ. ಹವಿರ್ಯಜ್ಞಸಂಸ್ಥಾ:- ಅಗ್ನ್ಯಾಧಾನ, ಅಗ್ನಿಹೋತ್ರ, ದರ್ಶಪೂರ್ಣಮಾಸ, ಚಾತುರ್ಮಾಸ್ಯ, ಅಗ್ರಹಾಯಣೇಷ್ಟಿ, ನಿರೂಢಪಶುಸ್ಕಂಧ, ಸೌತ್ರಾಮಣಿ

**ಸಪ್ತಸಂತಾನ**—ಕಟಾಕ, ಧನನಿಕ್ಷೇಪ, ಬ್ರಹ್ಮಸ್ಥಾಪನ, ದೇವಕುಲಪ್ರತಿಷ್ಠೆ, ವನನಿರ್ಮಾಣ, ಉದ್ಗ್ರಂಥರಚನಾ, ಪುತ್ರೋತ್ಪಾದನ.

**ಸಪ್ತಸ್ವಪಕ್ಷಬಲ**—ಮೂಲಬಲ, ಮಿತ್ರಬಲ, ಆಶ್ರಿತಬಲ, ಬಂಧುವರ್ಗಬಲ (ಪಿತೃಮಾತೃಸಂಬಂಧಿ) ಭೃತ್ಯಬಲ, ಕಾರ್ಯಕಾರಣ ಬಂಧಬಲ, ಪರಸ್ಪರ ಸಹಾಯಕಬಲ.

**ಸಪ್ತಸ್ವಪ್ನ**—ದೃಷ್ಟ, ಶ್ರುತ, ಅನುಭೂತ, ಪಾರ್ಥಿವ, ಕಲ್ಪಿತ, ಭಾವಿಕ, ದೋಷಜ.

**ಸಪ್ತಸ್ವರ**—ಷಡ್ಜ; ಋಷಭ, ಗಾಂಧಾರ, ಮಧ್ಯಮ, ಪಂಚಮ, ಧೈವತ, ನಿಷಾದ. ಸಂಜ್ಞಾಸ್ವರ:- ಸ, ರಿ,ಗ,ಮ,ಪ,ಧ,ನಿ. ಅನುಕರಣ:- ಕೇಕಿ, ವೃಷಭ, ಅಜ,ಸಿಂಹ (ಕ್ರೌಂಚರವ) ಕೋಕಿಲಧ್ವನಿ, ಅಶ್ವಹೇಷಾರವ, ಗಜಬೃಂಹಿತ. ಸ್ವರಸ್ಥಾನ:- ಕಂಠ, ಶಿರ, ನಾಸಿಕ, ಹೃದಯ, ಮುಖ,ನಾಭ, ಪೂರ್ವಾಂಗ. ಸ್ವರೋತ್ಪತ್ತಿಸ್ಥಾನ:- ಈಶಮುಖ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ, ನಿರಂಗಮುಖ. ದೇವತೆಗಳು:-ಬ್ರಾಹ್ಮೀ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿ. ವರ್ಣಗಳು:- ಅರುಣ, ಕಪಿಲ, ಸ್ವರ್ಣ, ನೀಲೋತ್ಪಲ, ಅಸಿತ, ಸಿತ, ಚಿತ್ರ. ರಸಗಳು:-ಶೃಂಗಾರ, ಹಾಸ್ಯ, ಕರುಣ, ರೌದ್ರ, ವೀರ, ಭಯಾನಕ, ಭೀಭತ್ಸ. ಪ್ರಸನ್ನಕಾಲ:-ಸೂರ್ಯೋದಯ,

ಮಧ್ಯಾಹ್ನ, ಅಪರಾಹ್ನ ಸಾಯಾಹ್ನ, ಪೂರ್ವರಾತ್ರಿ,ಅಪರರಾತ್ರಿ, ನಿಶಾಂತ. ಋಷಿಗಳು:- ಅಂಗಿರಾ, ಭೃಗು, ಕಶ್ಯಪ, ವಸಿಷ್ಠ, ನಾರದ, ಅತ್ರಿ, ಕಪಿಲ. ತಿಥಿ-ನಕ್ಷತ್ರಗಳು:- ಅಮಾವಾಸ್ಯೆ- ಆರ್ದ್ರಾ, ತ್ರಯೋದಶಿ- ಪುರ್ವಾಷಾಢ, ಪಂಚಮಿ-ರೇವತಿ, ಅಷ್ಟಮಿ-ವಿಶಾಖೆ, ಸಪ್ತಮಿ-ಮೂಲ, ತದಿಗೆ-ಅನುರಾಧ, ನವಮಿ-ಮಖಾ. (ಸಂ. ಶಾ.)

ಸಪ್ತಾಕಾಶ— ಅಪೋದಕ, ಋತಧಾಮ, ಅಪರಾಜಿತ, ವೃಷ್ನಸ್ವ ವಿಷ್ಟಪಮ್, ಅಧಿಧ್ಯೌ, ಪ್ರಧ್ಯೌ, ರೋಚನಾ.

ಸಪ್ತಾಚಾರ—ವೇದ, ವೈಷ್ಣವ, ಶೈವ, ದಕ್ಷಿಣ, ವಾಮ,ಸಿದ್ಧಾಂತ, ಕುಲ.(ಶಾಕ್ತ).

ಸಪ್ತಾನ್ನ—ಸಾಧಾರಣ, ಹುತ (ಬಲಿ) ದುಗ್ಧಾನ್ನ, ಪಶ್ವನ್ನ, ನೇತ್ರ, ಶ್ರೋತ್ರ, ಮನಃ ಪ್ರಾಣಾನ್ನ (ವಾಚನ, ಶ್ರವಣ,ಮನನದಮೂಲಕ).

ಸಪ್ತಾನೀಕ— ಹಸ್ತ್ಯಶ್ವರಥಪದಾತಿವೃಷಭ-ಗಂಧರ್ವ ನರ್ತಕೀವಾರ. (ಜೈ. ಪು.)

ಸಪ್ತಾವರಣ—(ನರಕ) ರೌರವ, ತಾಸ, ವಿಮೋಹನ, ಕೃಮಿಶ, ಲಾಲಾಭಕ್ಷ, ಅಧಃಶಿರಾ, ಅವೀಚಿ.

ಸಪ್ತಾವಸ್ಥೆ – ಅಜ್ಞಾನ, ಆವರಣ, ವಿಕ್ಷೇಪ, ಪರೋಕ್ಷಜ್ಞಾನ, ಅಪರೋಕ್ಷಜ್ಞಾನ, ಶೋಕನಿವೃತ್ತಿ, ನಿರಂಕುಶವೃತ್ತಿ.

ಸಪ್ತಾಶ್ವಗಳು—(ಛಂದೋರೂಪ) ಗಾಯಿತ್ರಿ, ಬೃಹತಿ, ಉಷ್ಣಿಕ್, ಜಗತಿ, ತ್ರಿಷ್ಟುಪ್ ಅನುಷ್ಟುಪ್, ಪಂಕ್ತಿ. (ವಿಷ್ಣು-ಪು.)

ಸಪ್ತೋಪಾಯ—(1) (ಯಜ್ಞೀಯ) ದೇಶ, ಕಾಲ, ದ್ರವ್ಯ, ಮಂತ್ರ, ಋತ್ವಿಜ, ದಕ್ಷಿಣೆ, ವಿಧಾನ. (2) ಮಂತ್ರ, ಔಷಧಿ, ಇಂದ್ರಜಾಲ, ಸಾಮ, ದಾನ, ಭೇದ, ದಂಡ.

ಸಪ್ತಾಂಗ—(ದೈಹಿಕ) ಶಿರ, ಮುಖ, ನೇತ್ರ, ಘ್ರಾಣ, ದೇಹಮಧ್ಯ, ಮೂತ್ರಸ್ಥಾನ, ಗುದದ್ವಾರ. ದೃಷ್ಟಿಸಂಬಂಧ:- ದ್ಯು, ಸೂರ್ಯ, ಅಗ್ನಿ, ಆಕಾಶ, ವಾಯು, ಉದಕ, ಭೂಮಿ,

ಅನುರೂಪಗುಣಸಪ್ತಕ— (ಘಟನಾನುಕೂಲ) ಕುಲ, ಧನ, ವಿದ್ಯಾ, ರೂಪ, ಯೌವನ (ಪ್ರಾಯ) ಶೀಲ, ಸದಾಚಾರ.

ಪೂಜಾಸಪ್ತಕ— ಪಿತೃಪೂಜೆ, ದೇವ, ಅತಿಥಿ, ಋಷಿ, ಪ್ರಜಾಪತಿ, ಭೂತಗಣ, ಜಗತ್‌ಪೂಜೆ. ಕ್ರಿಯಾಕರ್ಮ:- ಪಿಂಡದಾನ, ಯಜ್ಞ, ಅನ್ನದಾನ, ಸ್ವಾಧ್ಯಾಯ, ಪುತ್ರೋತ್ಪಾದನ, ಬಲಿ, ವಾತ್ಸಲ್ಯಭಕ್ತಿಪೂಜೆ.

ಭಕ್ತಿಸಪ್ತಾಂಗಗಳು – ವಿವೇಕ, ಅಭ್ಯಾಸ, ಕ್ರಿಯಾಕಲ್ಯಾಣ. ವಿಮೋಕ (ನಿಷ್ಕಾಮನೆ) ಅನವಸಾದ (ಅದೈನ್ಯ) ಅನುದ್ಧರ್ಷ.

ಶೈವಸಪ್ತವಿಧ—ಆದಿ, ಅನಾದಿ, ಅನುಶೈವ, ಮಹಾಶೈವ, ಜ್ಞಾನಶೈವ. ಯೋಗಶೈವ ವೀರಶೈವ.

**ಸಭಾಸಪ್ತಾಂಗ**— ಕವಿ, ವಿದ್ವಾಂಸ, ಭಟ್ಟ, ಗಾಯಕ, ಪರಿಹಾಸಕ, ಇತಿಹಾಸಕ, ಪೌರಾಣಿಕ.

**ಸಿದ್ಧಸಪ್ತಕ**—ಸಿದ್ಧೇಶ್ವರ, ಸಿದ್ಧವಟ, ಸಿದ್ಧಾಂಬಿಕಾ, ಸಿದ್ಧವಿನಾಯಕ, ಸಿದ್ಧೇಶಕ್ಷೇತ್ರಪತಿ, ಸಿದ್ಧರಸ, ಸಿದ್ಧಕೂಪ.

**ಸಂಧ್ಯೋಪಾಸನಾ ಕ್ರಿಯಾ ಸಪ್ತಕ**— ಮಾರ್ಜನ, ಪ್ರಾಣಾಯಾಮ, ಆಚಮನ, ಪುನರ್ಮಾರ್ಜನ, ಅಘಮರ್ಷಣ, ಸೂರ್ಯೋಪಸ್ಥಾನ, ಧ್ಯಾನಾವಾಹನಾದಿಜಪ-ವಿಧಿ.

**ಅಷ್ಟಕರ್ಮ-(ಬಂಧಗಳು)**—(ಏನಸ್ಸಂತಾನ) ಜ್ಞಾನಾವರಣೀಯ, ದರ್ಶನಾವರಣೀಯ. ವೇದನೀಯ, ಮೋಹನೀಯ, ಆಯುಷ್ಯ, ನಾಮ, ಗೋತ್ರ. ಅಂತರಾಯ. ಅಂತರ್ಭೇದಗಳು— ಜ್ಞಾನಾವರಣೀಯ (ಪಂಚವಿಧ)— ಮತಿ, ಶ್ರುತ, ಅವಧಿ, ಮನಃಪರ್ಯಾಯ, ಕೇವಲಾಬೋಧ. ದರ್ಶನಾವರಣೀಯ—ನಿದ್ರಾನಿದ್ರಾದಿನವವಿಧ. ವೇದನೀಯ—ಸಾತಾಸಾತಭೇದ. ಮೋಹನೀಯ—ದರ್ಶನ-ಚಾರಿತ್ರಾದಿ (28ವಿಧ). ಆಯುಷ್ಯ—ದೇವ, ಮನುಷ್ಯ, ತಿರ್ಯಕ್, ನರಕ. ನಾಮ—ಬಹುವಿಧ. ಗೋತ್ರ— ಉಚ್ಚ-ನೀಚಭೇದ. ಅಂತರಾಯ—(5ವಿಧ) ದಾನ, ಲೋಭ, ಭೋಗ, ಉಪಭೋಗ, ವೀರ್ಯ. (ಜೈ.ಪು.)

**ಅಷ್ಟಕಷ್ಟಗಳು**— ದೇಶಾಂತರ, ಭಾರ್ಯಾವಿಯೋಗ, ಭುಕ್ತಾನ್ನಭಕ್ಷಣ, ಆಪತ್ತಿನಲ್ಲಿ ಬಂಧುದರ್ಶನ, ಶತ್ರುಸಮಾವೇಶ, ಪರಾನ್ನಪ್ರತೀಕ್ಷೆ, ದಾರಿದ್ರ್ಯ. ಸಭೆಯಲ್ಲಾದ ಅಪಮಾನ.

**ಅಷ್ಟಗಣ(ಅಕ್ಷರಗಣಗಳು)**—ಮಗಣ, ಯಗಣ, ರಗಣ, ಸಗಣ, ತಗಣ, ಜಗಣ, ಭಗಣ, ನಗಣ. ದೇವತೆಗಳು—ಭೂ, ಜಲ, ಅಗ್ನಿ, ವಾಯು, ಆಕಾಶ, ಸೂರ್ಯ, ಚಂದ್ರ, ಸ್ವರ್ಗ. (ಛಂ).

**ಅಷ್ಟಗುಣಗಳು**— (ಜೀವೇಶ್ವರಪರ) ಸಂಖ್ಯಾಪರಿಮಾಣ, ಪೃಥಕ್ತ್ವ, ಸಂಯೋಗ, ವಿಯೋಗ, ವಿಭಾಗ, ಇಚ್ಛಾ. ಬುದ್ಧಿ, ಪ್ರಯತ್ನ. ಆತ್ಮಗುಣಾಷ್ಟಕ— ನಿಷ್ಪಾಪ, ಅಜರ, ಅಮರ, ದುಃಖರಹಿತ, ಕ್ಷುದ್ರಹಿತ, ಪಿಪಾಸಾರಹಿತ, ಸತ್ಯ ಸಂಕಲ್ಪ, ಸತ್ಯಕಾಮ. ಬ್ರಾಹ್ಮಣ್ಯಗುಣ— ಶೌಚ, ಕ್ಷಾಂತಿ, ಭೂತದಯೆ, ಅನಾಯಾಸ, ಅನಸೂಯಾ, ಅಕಾರ್ಪಣ್ಯ, ನಿಸ್ಪೃಹ, ಮಂಗಲ ಪ್ರವೃತ್ತಿಗುಣ. ಪ್ರಜ್ಞಾಗುಣ— ಶುಶ್ರೂಷಾ, ಶ್ರವಣ, ಗ್ರಹಣ, ಧಾರಣ, ಊಹಾಪೋಹ, ಅರ್ಥವಿಜ್ಞಾನ, ತತ್ವಜ್ಞಾನ, ಅಭಿನಿವೇಶ. **ಅಷ್ಟಗುರುಗಳು**—ಬೋಧಕ, ವೇದಕ (ಚೋದಕ) ಸೂಚಕ, ಕಾಮ್ಯ, ನಿಷಿದ್ಧ, ವಾಚಕ, ಕಾರಣಗುರು (ಶ್ರೇಷ್ಠ) ವಿದ್ಯಾ ಗುರು.

**ಅಷ್ಟತಾರಿಣಿ**—ತಾರಾ, ಉಗ್ರಾ, ಮಹೋಗ್ರಾ, ಕಾಳಿ, ವಜ್ರ, ಚಾಮುಂಡಿ, ಸರಸ್ವತಿ, ಕಾಮೇಶ್ವರಿ.

**ಅಷ್ಟತೈಜಸಸಿದ್ಧಿಗಳು**—ಅಗ್ನಿಭಯವರ್ಜ್ಯ, ಶರೀರದಲ್ಲಗ್ನ್ಯುತ್ಪಾದನ, ಜಲದಲ್ಲಗ್ನಿಸ್ಥಾಪನ, ಹಸ್ತದಲ್ಲಗ್ನಿಧಾರಣ; ಜಗದ್ದಹನ; ಪುನರ್ನಿರ್ಮಾಣ, ಶುದ್ಧೀಕರಣ; ಅಗ್ನಿಹೊರತು ವಾಯ್ವಾಕಾಶಮೂಲಕದೇಹಧಾರಣ.

**ಅಷ್ಟದಾನಗಳು**— (ಧರ್ಮಪ್ರೀತಿಪಾತ್ರ) ಅನ್ನ; ಪಾನ; ವಸನ; ಆಸನ; ಶಯ್ಯಾ; ಅಶ್ವ; ಸೂತ; ಗೋವು.

**ಅಷ್ಟದ್ವಾರಪಾಲಕರು**—(ವೈಕುಂಠಕ್ಕೆ) ಜಯ; ವಿಜಯ; ನಂದ; ಸುನಂದ; ಬಲ; ಪ್ರಬಲ; ಕುಮುದ, ಕುಮುದಾಕ್ಷ.

**ಅಷ್ಟದ್ವಾರಮಾತೃಕೆಯರು**—ಷಷ್ಠಿ; ಕುಮಾರಿ; ದನದೆ; ನಂದ; ವಿಮಲ; ಮಂಗಲ; ಅಚಲ, ಪದ್ಮಾ.

**ಅಷ್ಟದಿಕ್ಕುಗಳು**—ಪೂರ್ವ; ಆಗ್ನೇಯ. ದಕ್ಷಿಣ. ನೈರುತ್ಯ ಪಶ್ಚಿಮ; ವಾಯುವ್ಯ, ಉತ್ತರ, ಈಶಾನ್ಯ.

**ಅಷ್ಟದಿಕ್ಪಾಲಕರು**—ಇಂದ್ರ; ಅಗ್ನಿ; ಯಮ; ನಿಋತಿ; ವರುಣ; ವಾಯು; ಕುಬೇರ, ಈಶಾನ. ಇವರಪಟ್ಟಣ—ಅಮರಾವತಿ, ತೇಜೋವತಿ, ಸಂಯಮಿನಿ(ಕೈಮಿನಿ) ರಕ್ಷೋವತಿ; ಶುದ್ಧವತಿ (ರತ್ನಪುರಿ) ಗಂಧವತಿ. ಅಲಕಾವತಿ, ಯಶೋವತಿ. ವಾಹನಗಳು—ಐರಾವತ (ಆನೆ) ಟಗರು; ಕೋಣ; ಮನುಷ್ಯ (ಪಿಂಗಲ); ನೆಗಳು; ಜಿಂಕೆ; ಕುದುರೆ (ಪುಷ್ಪಕ) ಎತ್ತು (ವೃಷಭ). ಆಯುಧಗಳು:—ವಜ್ರ; ಶಕ್ತಿ; ದಂಡ; ಖಡ್ಗ. ಪಾಶ; ಅಂಕುಶ;ಗದಾ;ಶೂಲ. ವರ್ಣ:—ಶ್ವೇತ. ಲೋಹಿತ; ಕೃಷ್ಣ; ಧೂಮ್ರ; ಹರಿತ; ಕಪಿಲ; ಚಿತ್ರ; ಧವಳ.

**ಅಷ್ಟದಿಗ್ಗಜ**—ಐರಾವತ; ಪುಂಡರೀಕ; ವಾಮನ, ಕುಮುದ; ಅಂಜನಾ; ಪುಷ್ಪದಂತ; ಸಾರ್ವಭೌಮ; ಸುಪ್ರತೀಕ. ಹೆಣ್ಣಾನೆಗಳು:—ಅಭ್ರಮು; ಕಪಿಲೆ; ಪಿಂಗಳೆ;ಅನುಪಮೆ, ತಾಮ್ರಪರ್ಣಿ; ಸುದಂತಿ; ಅಂಜನೆ; ಅಂಜನಾವತಿ.

**ಅಷ್ಟದೇವಗಣ**—(ವೈವಸ್ವತಮನ್ವಂತರ) ವಸು; ರುದ್ರ; ಆದಿತ್ಯ; ವಿಶ್ವೇದೇವ; ಭೃಗು; ಆಂಗಿರ; ಸಾಧ್ಯ; ಮರುತ್.

**ಅಷ್ಟದೇವಯೋನಿಗಳು**—ಬ್ರಹ್ಮ; ಪ್ರಜಾಪತಿ; ದೇವ; ಗಂಧರ್ವ; ಯಕ್ಷ; ರಾಕ್ಷಸ; ಪಿತರ; ಪಿಶಾಚ.

**ಅಷ್ಟದೋಷಗಳು**— (ಚಿತ್ತಾಕ್ರಾಂತ) ಪ್ರಕೃತಿದೋಷ; ಆಗಂತುಕ; ಅವಸ್ಥಾಂತರ; ಅನನುಭವ; ಅಪರಿಚಯ; ಶಿಥಿಲಾಧಿಕಾರೋಪಾಧಿ; ಉನ್ಮಾದವ್ಯಾಧಿ; ಅನಭ್ಯಾಸ ದೋಷ;

**ಅಷ್ಟದ್ರವ್ಯ**—ತೆಂಗಿನಕಾಯಿ; ಬೆಲ್ಲ; ಅರಳು; ಅವಲಕ್ಕಿ; ಬಾಳೆಹಣ್ಣು; ಕಬ್ಬು; ಎಳ್ಳು; ಅರಳುಹಿಟ್ಟು. ಹೋಮಸಂಬಂಧ:—ಅಶ್ವತ್ಥ; ಉದುಂಬರ; ಪ್ಲಕ್ಷ; ನ್ಯಗ್ರೋಧ; ತಿಲ,

ಸಿದ್ಧಾರ್ಥ; ವಾಯುಸು; ಅಜ್ಯ.

**ಅಷ್ಟಧಾತುಗಳು**—ಸ್ವರ್ಣ; ರಜತ; ತಾಮ್ರ; ವಂಗ; ಯಶದ; ಸೀಸ; ಲೋಹ; ಪಾರದ. ಶಾರೀರಿಕ:—ತ್ವಕ್; ಮಾಂಸ; ಅಸ್ಥಿ; ರಕ್ತ; ಮೇಧಾ; ಮಜ್ಜಾ; ಶಿರಾ; ವೀರ್ಯ.

**ಅಷ್ಟನಾರಕ**—ರೌರವ; ಧ್ವಾಂತ; ಶೀತ; ಉಷ್ಣ; ಸಂತಾಪ; ಅಂಬುಜ, ಮಹಾಂಬುಜ; ಕಾಲಸೂತ್ರ. ರಾಜನರಕಾಷ್ಟಕ:—ಲಾಕ್ಷಾಪ್ರಲೇಪ; ಮಾಂಸಾದ; ನಿರುಚ್ಛ್ವಾಸನಿಶ್ವಾಸ; ಯುಗ್ಮಾದ್ರಿ; ಶಾಲ್ಮಲಿ; ಮೋಹಪ್ರದೀಪಕ; ಕ್ಷುತ್ಪಿಪಾಸಕ; ಕ್ರಿಮಿಕುಲ. ರಾಜರಾಜ ನರಕಾಷ್ಟಕ:— ಲೋಹಸ್ತಂಭ; ವಿಣ್ಮೂತ; ವೈತರಣಿ; ತಾಮಿಸ್ರ, ಅಂಧತಾಮಿಸ್ರ; ಕುಂಭೀಪಾಕ; ಮಹಾರೌರವ; ಮಹಾಪಾದಾನುಗವೀಚಿ. ಅಷ್ಟಮಹಾನರಕ:— ಸೂಚೀಮುಖ; ಕಾಲ; ಖಡ್ಗಕ್ಷುರಧಾರಾ; ಅಂಬರೀಷಕ; ತಪ್ತಾಂಗಾರ; ಮಹಾಧಾರಾ; ಸಂತಾಪ.

**ಅಷ್ಟಪಾಶಗಳು**—ಲಜ್ಜೆ; ಜಿಗುಪ್ಸೆ; ಕುಲ; ಶೀಲ; ಭಯ, ಶಂಕೆ; ತೃಷೆ; ಗರ್ವ.

**ಅಷ್ಟಪುರ**—(ಪೌರ್ಯಷ್ಟಕ) ಆಕಾಶಾದಿಭೂತ; ತನ್ಮಾತ್ರ; ಜ್ಞಾನೇಂದ್ರಿಯಪಂಚಕ; ಕರ್ಮೇಂದ್ರಿಯಪಂಚಕ; ಪ್ರಾಣಾದಿವಾಯುಗಳು ಅಂತಃಕರಣಗಳು, ಕಾಮ; ಕರ್ಮ ಮತ್ತು ತಮ (ಅವಿದ್ಯಾ). (ವೇದಾಂತ.)

**ಅಷ್ಟಪುರಾಣಾಂಗಗಳು**— ಲೋಕಾಕಾರಕಥನ, ದೇಶನಿವೇಶೋಪದೇಶ; ನಗರ ಸಂಪದ್ವರ್ಣನ; ರಾಜ್ಯರಮಣೀಯತಾಖ್ಯಾನ; ತೀರ್ಥಮಹಿಮಾಸಮರ್ಥನ; ಚತುರ್ಗತಿ ನಿರೂಪಣ; ತಪೋದಾನಾದಿವರ್ಣನ; ತತ್ಫಲಪ್ರಾಪ್ತಿ. (ಜೈ. ಪು)

**ಅಷ್ಟಪ್ರಕೃತಿಗಳು**—ಪಂಚಭೂತಗಳು; ಮನ; ಬುದ್ಧಿ; ಅಹಂಕಾರ.

**ಅಷ್ಟಪ್ರಧಾನರು**—(ರಾಜಾದಶರಥನ ಅಮಾತ್ಯ ಮಂಡಲ) ದೃಷ್ಟಿ; ವಿಜಯ; ಜಯಂತ, ಸಿದ್ಧಾರ್ಥ; ಅರ್ಥಸಾಧಕ; ಅಶೋಕ; ಮಂತ್ರಪಾಲ, ಸುಮಂತ್ರ. ಅಷ್ಟಪುರೋಹಿತರು:-(ಮಂತ್ರಿಮಂಡಲ) ಕಶ್ಯಪ, ಜಾಬಾಲಿ, ಗೌತಮ, ಸುಯಜ್ಞ; ಕಾತ್ಯಾಯನ;ವಾಮದೇವ, ಮಾರ್ಕಾಂಡೇಯ, ವಸಿಷ್ಠ.

**ಅಷ್ಟಪ್ರಮಾಣಗಳು**—ಪ್ರತ್ಯಕ್ಷ, ಅನುಮಾನ ಉಪಮಾನ, ಶಬ್ದ, ಅರ್ಥಾಪತ್ತಿ; ಅನುಪಲಬ್ಧಿ, ಸಂಭವ, ಐತಿಹ್ಯ. (ಪು-ಮತ.)

**ಅಷ್ಟಬುದ್ಧಿಸಿದ್ಧಿಗಳು**—(1) ಯಥಾಸಂಕಲ್ಪಸೃಷ್ಟಿನಿರ್ಮಾಣ; ಜಗದ್ರಕ್ಷಣ; ಜಗದ್ಬಲಯಾಧಿಕಾರ; ಕೃಪಾನುಗ್ರಹ; ಅಭಿಮತಲೋಕಪ್ರವರ್ತನ, ಚಿತ್ರಾರ್ಪಿತರೂಪ ಪ್ರದರ್ಶನ, ಪರರ ಹೃದಯಧಲ್ಲಿದ್ದು ಪ್ರೇರೇಪಿಸುವಿಕೆ; ಅಶುಭವನ್ನುತಿದ್ದಿ ಕಲ್ಯಾಣಮಾಡುವಿಕೆ, (ಯೋಗಿಗುಣಗಳಿವು. 64ವಿಧ.) (2) ನಿತ್ಯಾನಿತ್ಯವಿವೇಕ; ಭೋಗವಿರತಿ; ಪರಮ ಶಾಂತಿ; ಅವ್ಯಭಿಚಾರಭಕ್ತಿ; ನಿಶ್ಚಲಶ್ರದ್ಧೆ; ಆಸ್ತಿಕ್ಯ; ಬ್ರಹ್ಮಜ್ಞಾನ;, ಬ್ರಹ್ಮಾನಂದ. (ವೇದಾಂತೀಗುಣಗಳು).

**ಅಷ್ಟಭಾವಗಳು**—(ಪ್ರಕೃತಿಧರ್ಮ) ಧರ್ಮ; ಅಧರ್ಮ; ಜ್ಞಾನ; ಅಜ್ಞಾನ; ವೈರಾಗ್ಯ; ಅವೈರಾಗ್ಯ; ಐಶ್ವರ್ಯ; ಅನೈಶ್ವರ್ಯ.

**ಅಷ್ಟಭಾಗ್ಯಗಳು**—ಹಸ್ತಿ, ಅಶ್ವ, ಛತ್ರ, ಚಾಮರ, ಆಂದೋಲ, ಸೈನ್ಯ, ಕೋಶ, ರಾಜ್ಯ.

**ಅಷ್ಟಭೈರವರು**—ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಪಾಲಿ, ಭೀಷಣ, ಸಂಹಾರ. (ಇವರು ಕೈಲಾಸದ ದ್ವಾರರಕ್ಷಕರು.) ದಿಕ್ಕುಗಳು:—ಪೂರ್ವಾದ್ಯಷ್ಟದಿಕ್ಕುಗಳು. ಶಕ್ತಿ:— ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ, ನಾರಾಯಣಿ (ವೈಷ್ಣವಿ) ವಾರಾಹಿ. ಇಂದ್ರಾಣಿ; ಚಾಮುಂಡಿ; ಮಹಾಕಾಳಿ. ವಾಹನ:—ಹಂಸ; ವೃಷ; ಮೋಷ(ಚಂದ್ರಕಿ) ಗರುಡ; ಲುಲಾಯ(ಕೋಣ) ಗಜ; ಕೇಕಿ; ಗಿರಿಕಾ(ಮೂಷಿಕ). (ಇನ್ನೊಂದುವಿಧ:—ಅಸಿತಾಂಗ; ಸಂಹಾರ; ರುರು; ಕಪಾಲ; ಕ್ರೋಧ; ತಾಮ್ರಚೂಡ; ಚಂದ್ರಚೂಡ; ಮಹಾಭೈರವ) ಚತುರ್ದ್ವಾರದಲ್ಲಿ:— ನಂದಿಕೇಶ್ವರ; ವೀರಭದ್ರ; ನೀಲಲೋಹಿತ; ಮಹಾಕಾಳ.

**ಅಷ್ಟಭೋಗ**—(1) ಗೃಹ; ಶಯ್ಯಾ: ವಸನ; ಆಭರಣ; ಗಂಧ, ಪುಷ್ಪ; ತಾಂಬೂಲ; ಸ್ತ್ರೀ. (2) ಸ್ನಾನ, ಪಾನ; ಭೋಜನ; ವಸನ; ಗಂಧ; ಪುಷ್ಪ; ತಾಂಬೂಲ; ಸಂಯೋಗ. ಪ್ರಕಾರಾಂತರ:—ಆಗಾಮಿ; ಸಂಚಿತ; ಅಕ್ಷೀಣ; ನಿಕ್ಷೇಪ; ತರು; ಪಾಷಾಣ: ವಹ್ನಿ; ಜಲ.

**ಅಷ್ಟಮದ**—(1) ಕುಲ; ಶೀಲ; ರೂಪು; ಯೌವನ; ಧನ; ವಿದ್ಯೆ; ರಾಜ್ಯ; ವೃದ್ಧಿ;(ಭಾಗ್ಯ) (2) ರೂಪು; ಯೌವನ; ಸ್ತ್ರೀ; ವಿದ್ಯೆ; ಅರ್ಥ; ಕುಲ; ಉದ್ಯೋಗ; ಅನ್ನ. (ವೀ.ಶೈ.) (3) ಜಾತಿ; ಕುಲ; ಬಲ; ಪೂಜಾ; ಜ್ಞಾನ, ಶರೀರ; ಐಶ್ವರ್ಯ; ತಪೋಮದ.

**ಅಷ್ಟ ಮಹಾಯಜ್ಞ**— ಜ್ಯೋತಿಷ್ಟೋಮ; ಆಯುರ್ಯಾಗ; ಅತಿರಾತ್ರ: ಅಭಿಜಿತ್; ವಿಶ್ವಜಿತ್; ಸಪ್ತೋರ್ಯ್ಯೋಮ; ಮಹಾಕ್ರತು; ಅಶ್ವಮೇಧ.

**ಅಷ್ಟಮಾಸ್ತ್ರೀಯರು** (ಶ್ರೀಕೃಷ್ಣನಪಟ್ಟದರಸಿಯರು)—1. ರುಕ್ಮಿಣಿ-ಭೀಷ್ಮಕನ ಮಗಳು. 2. ಸತ್ಯಭಾಮ-ಸತ್ರಾಜಿತ ಕುಮಾರಿ. 3. ಮಿತ್ರವಿಂದೆ-ಜಯತ್ಸೇನಪುತ್ರಿ (ಶೈಬ್ಯೆ). 4. ಕಾಳಿಂದಿ-ಸೂರ್ಯಪುತ್ರಿ. 5. ಲಕ್ಷಣೆ-ಮದ್ರಕುಮಾರಿ. 6. ಸತ್ಯಾ (ನಾಗ್ನಜಿತ್) ಕೋಸಲರಾಜಕುಮಾರಿ. 7. ಭದ್ರಾ-ಕೇಕೆಯಧೃಷ್ಟಕೇತುವಿನಮಗಳು. 8. ಜಾಂಭವತಿ.

**ಅಷ್ಟ ಮೂರ್ತಿ**—ಪಂಚ ಭೂತಗಳು; ಸೂರ್ಯ; ಚಂದ್ರ, ಅಗ್ನಿ.

„ ರುದ್ರ; ಭವ; ಶರ್ವ; ಈಶಾನ; ಪಶುಪತಿ; ಭೀಮ; ಉಗ್ರ, ಮಹಾದೇವ. ಅಧಿವಾಸ:— ಸೂರ್ಯ ಮಂಡಲ, ಜಲ, ಭೂಮಿ, ವಾಯು, ಅಗ್ನಿ; ಆಕಾಶ, ಯಜಮಾನ-ಧರ್ಮ (ಯಾಜ್ಞೀಯ) ಚಂದ್ರ. ಗೃಹಿಣಿಯರು:— ಸುವರ್ಚಲೆ, ಉಷೆ, ಸುಕೇಶಿ, ಶಿವೆ, ಸ್ವಾಹಾ; ದಿಕ್; ದೀಕ್ಷೆ; ರೋಹಿಣಿ. ಸಂತತಿ:-ಶನಿ, ಶುಕ್ರ, ಅಂಗಾರಕ, ಮನೋಜವ, (ಹನುಮಂತ) ಸ್ಕಂಧ, ಸ್ವರ್ಗದೇವತೆ, ಸಂತಾನ,

ಬುಧ. (ವಿಷ್ಣು. ಪು.)

**ಅಷ್ಟಮಂಗಲ**—(1) ಸಿಂಹ, ವೃಷ, ಗಜ, ಕಲಶ, ವ್ಯಜನ, ವೈಜಯಂತಿ, ಭೇರಿ, ದೀಪ. (2) ಗೋವು, ಬ್ರಾಹ್ಮಣ, ಹಿರಣ್ಯ, ಸರ್ಪಿ, ಹುತಾಶನಿ, ಆದಿತ್ಯ, ಜಲ, ರಾಜ.

**ಅಷ್ಟಮಂಗಲಚಿಹ್ನಗಳು** – ಮತ್ಸಯುಗ್ಮ; ನಂದ್ಯಾವರ್ತ, ಭದ್ರಾಸನ, ಕುಂಭ, ಶ್ರೀವತ್ಸ, ದರ್ಪಣ, ಸಂಪುಟ, ಸ್ವಸ್ತಿಕ. (ಜೈ)

**ಅಷ್ಟವರ್ಗ**—(1) ಋಷಭ, ಜೀವಕ, ಮೇದೆ, ಮಹಾಮೇದ, ಋದ್ಧಿ, ವೃದ್ಧಿ, ಕಾಕೋಲಿ, ಕ್ಷೀರ ಕಾಕೋಲಿ. (2) ವಿಹಿತಕಾರ್ಯ ಪ್ರವೃತ್ತಿ-ಕೃಷಿವ್ಯಾಪಾರಾಭಿವೃದ್ಧಿ, ದುರ್ಗರಚನೆ, ಸೇತುನಿರ್ಮಾಣ, ಗ್ರಾಮಾರಣ್ಯ ರಕ್ಷಣೆ, ರತ್ನಶೋಧನೆ, ಗಜಾಶ್ವಶಾಲಾವ್ಯವಸ್ಥೆ, ಕಪ್ಪ ವಸೂಲಿ.

**ಅಷ್ಟವಸುಗಳು**– (1) ಆಪ, ಧರ, ಧ್ರುವ, ಸೋಮ, ಅನಿಲ, ಅನಲ, ಪ್ರತ್ಯೂಷ, ಪ್ರಭಾಸ. (2) ದೇವ, ಧ್ರುವ, ಸೋಮ, ಅಹ (ಸಾವಿತ್ರ) ಅನಿಲ, ಅನಲ, ಪ್ರತ್ಯೂಷ, ಪ್ರಭಾಸ.(ಮಹಾಭಾರತ) (3)ವಿಷ್ಣು. ಪು. ಪ್ರಕಾರ-ಧರ-ಬದಲಿಗೆ ಧರ್ಮ.

**ಅಷ್ಟವಿಧಗತಿವಿಶೇಷ**—(1) ಪಕ್ಷಿಗಳಗಮನಕ್ರಮ- ಡೀನ, ಉಡ್ಡೀನ (ಊರ್ಧ್ವಗಮನ) ಸಂಡೀನ (ವೇಗದಿಂದ ಹಾರುವುದು) ಕಾಂಡ (ಮೇಲಕ್ಕೇಳುವುದು) ವ್ಯಾಂಡ (ಕೆಳ ಹಾರುವುದು) ಕರ್ಪಾಟಿಕ (ರೆಕ್ಕೆ ಬಿಡಿಸಿ ಹಾರುವುದು) ಸಂಸ್ರಿನೀ; ಮಂಡಲವರ್ತಿ (ಸುಳಿದಾಡಿ ಹಾರುವುದು) (2) ಸಮರಸಂದರ್ಭ— ಉದ್ಭ್ರಾಂತ, ಪ್ರಾಂತ, ಆಪ್ಲುತ, ಆವಿದ್ಧ, ಪ್ರಸ್ರುತ, ಸಮುತ್ತಾರ್ಣ.

**ಅಷ್ಟವಿಧಧರ್ಮಗಳು**– ದಾನ, ಅಧ್ಯಯನ, ತಪ, ಇಜ್ಯಾ. (ಇವು ಕರ್ಮರೂಪ) ಧೃತಿ, ಸತ್ಯ, ಕ್ರಮ, ನಿರ್ಲೋಭತ್ವ. (ಇವು ಮನೋರೂಪ)

**ಅಷ್ಟವಿಧಪಾರ್ಥಿವಸಿದ್ಧಿಗಳು**— ಸ್ಥೂಲ-ಸೂಕ್ಷ್ಮ-ಬಾಲ್ಯ-ಯೌವನ-ವೃದ್ಧತ್ವವನ್ನು ಯಥಾ ಸಂದರ್ಭ ವಹಿಸುವುದು. ನಾನಾ ಜೀವ ಜಾತಿಗಳ ರೂಪ ಧರಿಸುವುದು. ಸದಾ ಸುಗಂಧ ಸೇವನೆ, ಪಾರ್ಥಿವತತ್ವಹೊರತಾದ ಭೂತ ತತ್ವಗಳಿಂದ ದೇಹತಾಳುವಿಕೆ. (ಇವು 16 ವಿಧ)

**ಅಷ್ಟವಿಧಭಕ್ತಿಗಳು**— ಶಿವ (ವಾಸಿಷ್ಟ) ಭಕ್ತಿ ವಾತ್ಸಲ್ಯ, ಪೂಜಾರತಿ, ಶಿವಾರ್ಚನೆ, ಮಂಗಲವ್ಯವಹಾರ, ಶಿವಕಥಾಶ್ರವಣೇಚ್ಛಾ, ಶಿವಧ್ಯಾನ, ಶಿವಕಥಾನುಕೂಲ್ಯ, ಪರತರ ಸಾತ್ವಿಕತೆ.

**ಅಷ್ಟವಿಧಭೋಗಗಳು** – ಕಾಮಭೋಗ ಸ್ಮೃತಿ, ಕೀರ್ತನ, ಕೇಳಿ, ಅಂಗಪ್ರೇಕ್ಷಣ, ಗುಹ್ಯ ಭಾಷಣ, ಅನುಕೂಲ ಸಂಕಲ್ಪ, ಕಾರ್ಯಪ್ರವೃತ್ತಿ (ಅಧ್ಯವಸಾಯ) ಸಂಸರ್ಗ (ಕ್ರಿಯಾನಿಷ್ಪತ್ತಿ)

**ಅಷ್ಟವಿಧಬ್ರಾಹ್ಮಣರು**– ಮಾತ್ರ, ಬ್ರಾಹ್ಮಣ, ಶ್ರೋತ್ರಿಯ, ಮುನಿ, ಅನೂಚಾನ,

ಭ್ರೂಣ, ಋಷಿಕಲ್ಪ, ಋಷಿಮುನಿ. ಪಕ್ಷಾಂತರ—ಜನ್ಮಮಾತ್ರ, ವಿಪ್ರ, ವೇದಜ್ಞ, ವೇದಓದಿಸುವಾತ, ಯಮನಿಯಮಾಸಕ್ತ, ಆಶ್ರಮವಾಸಿ, ಧ್ಯಾನನಿಷ್ಠ.

**ಅಷ್ಟವಿಧಮನೋಮಲ**— ಕಾಮ, ಕ್ರೋಧ, ಮೋಹ, ಹರ್ಷ, ಮದ, ಮಾನ, ಮತಿ, ವಿಷಾದ.

**ಅಷ್ಟವಿಧಮನೋಸಿದ್ಧಿಗಳು**—(1) ಶಮ, ದಮ, ಉಪರತಿ, ತಿತಿಕ್ಷೆ, ಶಾಂತಿ, ಇಷ್ಟಾರ್ಥ ಪೂರ್ತಿ, ನಿರಿಚ್ಛೆ, ಸರ್ವಜ್ಞತ್ವ. (2) ಯಥಾಕಾಮೋಪಲಬ್ಧಿ, ಸರ್ವಗೂಢಾರ್ಥ ದರ್ಶನ, ಸಮಸ್ತ ಘಟನಾವಲೋಕನ, ಯಥೇಚ್ಛಾಗಮನ, ಸರ್ವಶಕ್ತಿತ್ವ, ಕಲ್ಯಾಣ ಗುಣದರ್ಶಿತ್ವ, ಪ್ರಿಯ ವಸ್ತುಗಳನ್ನು ನಿರ್ಮಿಸುವಿಕೆ, ಧ್ಯಾನದಿಂದಲೇಕಂಡುಕಾಣಿಸಿ ಕೊಳ್ಳುವಿಕೆ. (48 ವಿಧ)

**ಅಷ್ಟವಿಧಜಲಸಿದ್ಧಿಗಳು**—ನೀರಮೇಲೆ ನಡೆದಾಡುವುದು, ಸಮುದ್ರವನ್ನೇಕುಡಿಯುವುದು, ನೀರಸದಲ್ಲಿ ರಸಾರೋಪಣ, ನಿರ್ಜನಸ್ಥಳದಲ್ಲಿ ಜಲದುತ್ಪಾದನ, ಹಸ್ತಾಗ್ರದಮೂಲಕ ಜಲಸ್ತಂಭನ, ಮಹಾಜಲವಾಸ, ಯಾವಘಾತವಾದರೂ ಗಾಯಗೊಳ್ಳದಿರುವುದು, ಅಗ್ನಿ ವಾಯುರಾಕಾಶತತ್ವಗಳಿಂದ ದೇಹಧರಿಸುವುದು.

**ಅಷ್ಟವಿಧವಾಯುಸಿದ್ಧಿಗಳು**—ಮನೋಜವ, ಪರಕಾಯ ಪ್ರವೇಶ, ಗುರುತ್ವ, ಲಘುತ್ವ, ಹಸ್ತಾಗ್ರಗಳಲ್ಲಿ ವಾಯುವಿನ ಶಕ್ತಿತೋರುವುದು, ಪರ್ವತಾದಿ ಮಹಾವಸ್ತುಗಳನ್ನೆತ್ತು ವುದು, ಬೆರಳ ತುದಿಯಿಂದ ಭೂಮಿಯನ್ನದುರಿಸುವುದು, ಆಕಾಶ ತತ್ವದಿಂದ ದೇಹ ಧರಿಸುವುದು. (ಗಂಧರ್ವಗುಣಗಳಿವು)

**ಅಷ್ಟವಿಧರದನಕ್ಷತ**-ಪರೋಪಗೂಢ, ಅಂಕುಶಯಾನಕ ಪ್ರವಾಲಮಣಿ,ಸ್ಫುಟಮಾಲಿಕಾ, ಖಂಡಾಭ್ರಕ, ಮಂಡಲಾಕೃತಿ ಕ್ರೋಧಚರ್ವಿತ, ವರಾಹಚರ್ವಿತ.

**ಅಷ್ಟವಿಧರಾಜ್ಯಭಾರಕ್ರಮ**—ಸಾಮ್ರಾಜ್ಯ, ಭೋಜ್ಯರಾಜ್ಯ, ಸ್ವಾರಾಜ್ಯ, ವೈರಾಜ್ಯ(ರಾಜ ರಿಲ್ಲದಾಗ) ಪಾರಮೇಷ್ಠ್ಯ (ವೇದಕಾಲ) ಮಹಾರಾಜ್ಯ (ಅಧಿಪತ್ಯಮಯ) ಸಾಮಂತ ಪರ್ಯಾಯಾ (ಸಾಮಂತಾಧೀನ). ಐತರೇಯ.

**ಅಷ್ಟವಿಧವಿವಾಹ**—1. ಬ್ರಾಹ್ಮಣ, 2. ದೈವ, 3. ಆರ್ಷ, 4. ಪ್ರಾಜಾಪತ್ಯ, 5. ಗಾಂಧರ್ವ 6. ಅಸುರ, 7. ಪೈಶಾಚ, 8. ರಾಕ್ಷಸ ಸೂ:— 1. ಕನ್ನೆಯನ್ನು ಏನೂಪಡೆಯದೆ ಶೀಲವಂತನಿಗೆ ವಿವಾಹ ಮಾಡಿಕೊಡುವುದು, 2. ಋತ್ವಿಕ್ಕುಗಳಿಗೆ ದಕ್ಷಿಣಾರೂಪ ಕೊಡುವುದು, 3. ಗೋ ಅಥವಾ ವೃಷಭವನ್ನು ಮಾತ್ರಪಡೆದುಕೊಂಡು ಮಾಡುವದಾನ. 4. ಗೃಹಸ್ಥಧರ್ಮೋಚಿತವಾಗಿ ಕೊಡುವುದು, 5. ಸ್ತ್ರೀ ಪುರುಷರನ್ಯೋನ್ಯ ಪ್ರೀತಿಯಿಂ ದಾಗುವ ವಿವಾಹ, 6. ಹಣಕ್ಕಾಗಿಕೊಡುವ ಕನ್ಯಾದಾನ, 7. ಅಪಹರಿಸಿ ತಂದಾಗುವ ವಿವಾಹ. ೮ ಬಲಾತ್ಕಾರದಿಂದೆಳೆದುತಂದು ಮಾಡಿಕೊಳ್ಳುವ ವಿವಾಹ.

**ಅಷ್ಟವಿಧಾಕಾಶಸಿದ್ಧಿಗಳು**— (1) ಆಕಾಶಗಮನ, ಇಂದ್ರಿಯಾದರ್ಶನ, ಛಾಯಾವ

ವಾರಣ, ಅತರೀರತ್ವ (ತನ್ಮಾತ್ರಾರೂಪ) ತ್ರೈಲೋಲ್ಲಂಘನ, ಆಕಾಶ ಪಿಂಡೀಕರಣ, ದೂರದಲ್ಲಾದ ಶಬ್ದಗ್ರಹಣ, ಸಮಸ್ತ ಪ್ರಾಣಿಗಳ ಅಭಿಪ್ರಾಯ ತಿಳಿಯುವಿಕೆ, (ಇಂದ್ರ ಗುಣಗಳಿವು. 40 ವಿಧ) (2) ನಾದಲಯ, ನಾದಾನುಭೂತಿ, ನಾದರೂಪತ್ವ, ಅವಕಾಶ ಕಲ್ಪನ, ನಿರವಕಾಶ ಪರಿಪೂರ್ಣತೆ, ವಾಯುಪರಿಕಲ್ಪನೆ, ನಿರೂಪದರ್ಶನ, ಅದೃಶ್ಯ ಕರಣ. (ಇವು ಲಂಬಿಕಾಯೋಗ ಭೇದ)

**ಅಷ್ಟವಿಧಾಹಂಕಾರಸಿದ್ಧಿಗಳು**— ತಾಡನ, ಛೇದನ, ಬಂಧನ, ಮೋಹನ, ಗ್ರಹಣ, ಸಂಸರಣ ಪರಿವರ್ತನ, ಪ್ರಸಾದ, ಮೃತ್ಯುಂಜಯತ್ವ. (ಪ್ರಾಜಾಪತ್ಯಗುಣಗಳಿವು 48ವಿಧ) (2) ಸ್ವಾತಂತ್ರ್ಯಸಿದ್ಧಿ, ಸ್ವಚ್ಛಂದವ್ರತ, ನಿಯಾಮಕತ್ವ, ಸ್ವೇಚ್ಛಾನುವರ್ತನ, ಅಗ್ರಹಾರಿತ್ವ, ತತ್ವಸೇವೆ, ಅಹಂಭಾವ, ಧರ್ಮವೀರತ್ವ.

**ಅಷ್ಟವಿಧಾರ್ಚನೆ**—(1) ಜಲ, ಗಂಧ, ಅಕ್ಷತೆ, ಪುಷ್ಪ (ಬಿಲ್ವ ಅಥವಾ ತುಲಸಿ) ಧೂಪ, ದೀಪ, ನೈವೇದ್ಯ, ತಾಂಬೂಲ. (2) ಅಹಿಂಸೆ, ಇಂದ್ರಿಯನಿಗ್ರಹ, ನಿರಹಂಕಾರ, ನಿರ್ವ್ಯಾಪಾರ, ಸದ್ಭಾವ, ಬ್ರಹ್ಮಚರ್ಯ, ಸೂನೃತ, ಶಿವಸಂಪತ್ತಿ (ಶರಣರ ಪೂಜಾ ಪುಷ್ಪಗಳಿವು.)

**ಅಷ್ಟವಿಧಾನಂದ**— ವಿಷಯಾನಂದ, ವಿದ್ಯಾನಂದ, ವಾಸನಾನಂದ, ಬ್ರಹ್ಮಾನಂದ, ಮುಖ್ಯಾನಂದ, ನಿಜಾನಂದ, ಆತ್ಮಾನಂದ, ಅದ್ವೈತಾನಂದ.

**ಅಷ್ಟಶ್ರಾದ್ಧಗಳು**—ದೇವ, ಋಷಿ, ದಿವ್ಯ, ಮಾನವ, ಭೂತ, ಪಿತೃ, ಮಾತೃ, ಆತ್ಮಶ್ರಾದ್ಧ.

**ಅಷ್ಟಸಾತ್ವಿಕಭಾವಗಳು**— ಸ್ವೇದ, ಅಶ್ರು, ಸ್ತಂಭ, ಸ್ವರಭೇದ, ವೈವರ್ಣ್ಯ, ಪುಲಕ, ಕಂಪನ, ಪ್ರಲಯ.

**ಅಷ್ಟಪಾರಮೇಷ್ಠಿಗುಣಗಳು**— ಕ್ಷಾಯಿಕಸಮ್ಯಕ್ತ್ವ, ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಸೂಕ್ಷ್ಮತ್ವ, ಅಗುರುಲಘುತ್ವ, ಅವಗಹನ, ಅವ್ಯಾಬಾಧ. (ಜೈ.)

**ಅಷ್ಟಸಿದ್ಧಿಗಳು**—(ಬೌದ್ಧಿಕ) ಊಹಸಿದ್ಧಿ, ಶಬ್ದಸಿದ್ಧಿ, ಅಧ್ಯಾಯನಸಿದ್ಧಿ, ಮೋದಸಿದ್ಧಿ (ಆಧ್ಯಾತ್ಮಿಕ ದುಃಖ ನಿವೃತ್ತಿ) ಪ್ರಮುದಿತ ಸಿದ್ಧಿ (ಆಧಿ ಭೌತಿಕ ದುಃಖಜಯಿಸುವುದು) ಮೋದಮಾನಸಿದ್ಧಿ (ಆಧಿ ದೈವಿಕವನ್ನು ದಾನಾದಿಗಳಿಂದ ಗೆಲುವುದು) ಸುಹೃತ್ಪ್ರಾಪ್ತಿ (ಸ್ನೇಹಿತರಿಂದಾಗುವ ಅರ್ಥಸಿದ್ಧಿ) ದಾನರೂಪ (ಗುರುಜನ ಸೇವಾಸಿದ್ಧಿ).

**ಅಷ್ಟಸಹಜಸಿದ್ಧಿಗಳು**— ಮಿಥುನೋತ್ಪತ್ತಿ (ವಿಷಯಾನಂದ — ಕೃತ ಯುಗದಲ್ಲಿ ಸಫಲ) ರಸೋಲ್ಲಾಸ, ಸಕೃತ್‌ವೃತ್ತಿಮಯ, ಗೃಹ ವೃಕ್ಷಾತ್ಮಿಕ, ಕಲ್ಪವೃಕ್ಷಾತ್ಮಕ, ಸಂಕಲ್ಪ ಸಿದ್ಧಿ, ಪ್ರಕಾಮಸೃಷ್ಟಿ, ಅಕೃಷ್ಟಪಚ್ಯಸಿದ್ಧಿ.

**ಅಷ್ಟಸಿದ್ಧಿಪ್ರಕಾರ**— ಪಾರ್ಥಿವ, ಜಲಮಯ, ತೈಜಸ, ವಾಯುಸಂಬಂಧಿ, ಆಕಾಶ ಸಂಬಂಧಿ, ಮಾನಸ, ಅಹಂಕಾರ, ಬುದ್ಧಿಜ (ಮುಖ್ಯ ಎಂಟೆಂಟು ವಿಧ) ಲೋಕಗಳು:- ಈಶಾನ, ರಾಕ್ಷಸ, ಯಕ್ಷ, ಗಂಧರ್ವ, ಇಂದ್ರ, ಚಂದ್ರ, ಪ್ರಾಜಾಪತ್ಯ, ಬ್ರಹ್ಮಲೋಕ.

**ಅಷ್ಟಸಂಧಿಗಳು**— ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ, ಧಾತು, ಅಪಭ್ರಂಶ, ಅನ್ವಯ (ವ್ಯಾ– ಕೇಶಿರಾಜ)

**ಅಷ್ಟಸ್ಥಾಯಿಭಾವ**— ರತಿ, ಹಾಸ, ಶೋಕ, ಕೋಪ, ಉತ್ಸಾಹ, ಜಿಗುಪ್ಸೆ, ಭಯ, ವಿಸ್ಮಯ. (ಶಮ ಕೂಡಿದಾಗ ನವರಸ.)

**ಅಷ್ಟಾದಿಶಾಬ್ದಿಕರು**—(1) ಬ್ರಹ್ಮ, ಇಂದ್ರ, ಯಾಮ್ಯ, ರೌದ್ರ, ವಾಯವ್ಯ, ವಾರುಣ, ಸಾವಿತ್ರ, ವೈಷ್ಣವ (ಇವುಉಪಲಬ್ಧವಿಲ್ಲ.) (2) ಬೃಹಸ್ಪತಿ, ಇಂದ್ರ, ಭರದ್ವಾಜ, ಅಪಿಶಾಲ; ಭಾಗುರಿ, ಕಾಶಕೃತ್ಸ್ನ, ಶಾಕಟಾಯನ, ಪೌಷ್ಕರಸಾದಿ, (ಅತಿಪ್ರಾಚೀನರು) (3) ಪಾಣಿನಿ, ಕಾತಂತ್ರ, ಚಂದ್ರಗೋಮಿ (ಚಾಂದ್ರ) ಪೂಜ್ಯಪಾದ (ಜೈನೇಂದ್ರ) ವಾಮನ (ವಿಶ್ರಾಂತ ವಿದ್ಯಾಧಾರ) ಪಾಲ್ಯಕೀರ್ತಿ (ಅಭಿನವಶಾಕಟಾಯನ) ಸ್ವರೂಪಾಚಾರ್ಯ (ಸಾರಸ್ವತ) ಹೇಮಚಂದ್ರ (ಹೈಮ). ಸೂ:– ಇವರಲ್ಲದೆ ಚಾರಾಯಣ, ಮಾಧ್ಯಂದಿನಿ, ಗೌಡಿ, ಶೌನಕಿ, ಗೌತಮ, ವ್ಯಾಡಿ, ಕಾಶ್ಯಪ, ಗಾರ್ಗ್ಯ ಗಾಲವ, ಶಾಕಲ್ಯ, ಸೇನಕ, ಸ್ಫೋಟಾಯನ, ಕ್ರೋಷ್ಟಾ, ಪತಂಜಲಿ, ಭೋಜ, ಕ್ರಮದೀಶ್ವರ, ಭೋಪದೇವ, ಸುಪದ್ಮ. (ಮೊದಲಾದ ವೈಯಾಕರಣಿಗಳಿದ್ದಾರೆ.)

**ಅಷ್ಟಾಯುಷ್ಯಕಾರರು**—ಅಗ್ನಿ, ಬ್ರಹ್ಮ, ಸೋಮ, ದೇವ, ಋಷಿ, ಪಿತರ,ಯಜ್ಞ, ವರುಣ.

**ಅಷ್ಟಾರ್ಘ್ಯ**— ಕ್ಷೀರ; ಘೃತ, ಮಧು, ದಧಿ, ಕುಶ, ರಕ್ತಕರವೀರ, ರಕ್ತಚಂದನ, ಜಲ. ಶ್ರಾದ್ಧಕಲ್ಪ—ಉಶೀರ, ದೂರ್ವ, ಕುಶ, ತಿಲ, ಜಲಾಕ್ಷತ, ಚಂದನ, ತುಲಸಿ, ಭೃಂಗಪತ್ರ (ಪುಷ್ಪ)

**ಅಷ್ಟಾವಧಾನ**— 1 – 4 ವೇದಗಳು, ಉಪವೇದಗಳು, ಪುರಾಣ, ಇತಿಹಾಸ, ಸಂಗೀತ·

**ಅಷ್ಟಾವರಣ**—ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ಭಸ್ಮ, ರುದ್ರಾಕ್ಷ ಮಂತ್ರ. (ಕ್ರಿಯಾಪ್ರಧಾನ- ವೀ. ಶೈ.)

**ಅಷ್ಟಾಂಗಗಳು**— 1 (ಶಾರೀರಿಕ) ಪಾದಾಂಗುಲ, ಜಾನ (ಮಂಡಿ) ಹಸ್ತ, ಉರ, ವಕ್ಷ, ಘ್ರಾಣ. ಭ್ರೂಮಧ್ಯ. ಮಸ್ತಕ. ವೈದ್ಯಕೀಯ:-ಶಲ್ಯತಂತ್ರ (ಶಸ್ತ್ರಕ್ರಿಯೆ) ಶಾಲಾಕ್ಯತಂತ್ರ, ಕಾಯಚಿಕಿತ್ಸಾ, ಭೂತವಿದ್ಯೆ. ಕೌಮಾರಭೃತ್ಯ. ಅಗದ (ವಿಷವೈದ್ಯ) ರಸಾಯನಿಕ, ವಾಜೀಕರಣ. ಸ್ಥಾನಾಷ್ಟಕ—ಸೂತ್ರ, ನಿಧಾನ, ವಿಮಾನ; ಶರೀರ, ಇಂದ್ರಿಯಾಭಿಧಾನ ಚಿಕಿತ್ಸಾ, ಕಲ್ಪ. ಸಿದ್ಧಿಸ್ಥಾನ. (ಚರಕ), ಸಾಮುದ್ರಿಕ—ಶರೀರ, ಆವರ್ತ, ಗಂಧ, ಛಾಯ, ಸತ್ವ, ಸ್ವರ, ಗತಿ, ವರ್ಣ. (ಸೂ–ಇವುಗಳಪರಿಜ್ಞಾನದಿಂದ ವ್ಯಕ್ತಿಗೌರವ ತಿಳಿಯಲಾಗುವುದು.)

**ಅಷ್ಟಾಂಗಪದ್ಧತಿ**— (ಗಣಿತಶಾಸ್ತ್ರ) ಯೋಗ (ಸಂಕಲನ) ವಿಯೋಗ (ವ್ಯವಕಲನ) ಪೂರಣ (ಗುಣಕ) ಭಾಗ, ತ್ರೈರಾಶಿ, ವರ್ಗ, ಮೂಲ, ಘನ.

**ಅಷ್ಟಾಂಗಹೃದಯ**—ಕಾಯ, ಬಾಲ, ಗ್ರಹ, ಊರ್ಧ್ವಾಂಗ, ಶಲ್ಯ, ದಂಷ್ಟ್ರ,ಜರಾ, ವೃಷ.

(ಆಯುರ್ವೇದ).

**ಅಷ್ಟಾಂಗಯೋಗ**—ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ. ಶಿವಯೋಗಪ್ರಕಾರ:-ಭಕ್ತಿ,ವೈರಾಗ್ಯ, ಅಭ್ಯಾಸ, ಧ್ಯಾನ, ಏಕಾಂತ, ಭಿಕ್ಷಾಟನೆ, ಲಿಂಗಾರ್ಚನೆ, ಶಿವಸ್ಮರಣೆ.(ಶೈ.)

**ಅಷ್ಟಾಂಗಿಕಆರ್ಯಧರ್ಮ**—ಸಮ್ಯಕ್‌ದೃಷ್ಟಿ, ಸಮ್ಯಕ್ಸಂಕಲ್ಪ, ಸಮ್ಯಗ್ವಚನ, ಸಮ್ಯಕ್ ಕರ್ಮ, ಸಮ್ಯಗಾಜೀವ, ಸಮ್ಯಗ್ವ್ಯಾಯಾಮ, ಸಮ್ಯಕ್‌ಸ್ಮೃತಿ, ಸಮ್ಯಕ್ಸಮಾಧಿ. (ಬೌ)

**ಅಷ್ಟೈಶ್ವರ್ಯ**—ದಾಸೀವರ್ಗ, ಭೃತ್ಯವರ್ಗ, ಬಂಧುವರ್ಗ, ಪ್ರಜಾಸಂಪತ್, ವಸ್ತ್ರ, ವಾಹನ, ಧನ, ಧಾನ್ಯ,ಐಶ್ವರ್ಯ. (ಯೋಗೈಶ್ವರ್ಯಸಿದ್ಧಿಗಳು)—ಅಣಿಮಾ,ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ವಶಿತ್ವ, ಈಶತ್ವ (ಈಶ್ವರೀಯ).

**ಅಗ್ನ್ಯಷ್ಟಾಭಿಧಾನ**—ವಹ್ನಿ, ಸಪ್ತಾರ್ಚಿ, ಕೃಶಾನು, ಹವ್ಯವಾಹ, ಅಗ್ನಿ, ಪಾವಕ, ಶುಕ್ರ, ಹುತಾಶನ.

**ಅರ್ಘ್ಯಾಷ್ಟಗಂಧ**— (ಶಕ್ತಿಪರ) 1 ಅಗರು, 2 ಕರ್ಪೂರ, 3 ಕುಂಕುಮ, 4 ಚಂದನ, 5 ಕಚೋರ, 6 ರೋಚನ, 7 ಕಪಿ, 8 ಜಟಾಮಾಂಸಿ.

**ವಿಷ್ಣುಪರ**—1- 4- 8; ಹ್ರೀವೇರ, ಕುಷ್ಠ, ಸೇವಕ.

**ಶಿವಪರ**—1- 4 ಜಲ, ಕಮಲ, ಉಶೀರ, ಕುಷ್ಠ.

**ಅಭಿದಮ್ಮಾಷ್ಟಾಂಗಗಳು**—ಪಟ್ಠಾನ, ಧಮ್ಮಸಂಘಣಿ, ಧಾತುಕಥೆ, ಪುಗ್ಗಲ, ಪನ್ನತ್ತಿ, ವಿಭಂಗ, ಯಮಕ, ಕಥಾವಸ್ತು. (ಬೌ)

**ಉಪದ್ವೀಪಾಷ್ಟಕ**— (ಜಂಬೂದ್ವೀಪದಸುತ್ತಣವು) ಸ್ವರ್ಣಪ್ರಸ್ಥ, ಚಂದ್ರಶುಕ್ಲ, ಆವರ್ತನ, ರಮಣಕ, ಮಂದರ, ಹರಿಣ, ಪಾಂಚಜನ್ಯ, ಸಿಂಹಳ-ಲಂಕಾ

**ಧರ್ಮಗ್ರಂಥಭೇದಗಳು**—ವೇದ, ವೇದಾಂಗ, ಉಪವೇದ, ಪುರಾಣೇತಿಹಾಸ, ಸ್ಮೃತಿ, ದರ್ಶನ, ಆಗಮ, ನಿಬಂಧ.

**ನಾಯಿಕೆಯರಅಷ್ಟವಿಧಾವಸ್ಥೆ** — ಸ್ವಾಧೀನಪತಿಕೆ, ಗತಭರ್ತಾರಿಕೆ, ಅಭಿಸಾರಿಕೆ, ಅಭಿಸಂಧಿತೆ, ವಿರಹೋತ್ಕಂಠಿತೆ, ವಾಸಕಸಜ್ಜಿಕೆ, ವಿಪ್ರಲಬ್ಧೆ, ಖಂಡಿತೆ, (ರಸ—ಶಾ.)

**ನಾಯಿಕಾಸಖೀಭೇದ**— (ಸಹಾಯಕ ದೂತಿಯರು) ದೂತಿ, ದಾಸಿ, ಸಖಿ, ಚೇಟಿ, ಪ್ರಾತಿವೇಶಿನಿ, ಧಾತ್ರಿಕೆ ಶಿಲ್ಪಿನಿ, ಯೋಗಿನಿ (ವಾಲಿಂಗಿಸಿ.)

**ಪ್ರಣಾಮಾಷ್ಟಾಂಗ**— 1 ಪಾದಗಳೆರಡು, ಹಸ್ತಗಳೆರಡು, ಭುಜಗಳೆರಡು, ವಕ್ಷ, ಲಲಾಟ, 2 ಉರ, ಶಿರ, ದೃಷ್ಟಿ, ಮನ, ವಾಕ್, ಪಾದ, ಜಾನು, ಹಸ್ತ.

**ರಸಾಷ್ಟಕ**—ಹಿತವನ್ನ, ಶೋಚ್ಯ, ದ್ವೇಷ್ಯ, ಪ್ರತಿಭಟ, ಭೀಷಣ, ಜಿಗುಪ್ಸನೀಯ, ಆಶ್ಚರ್ಯ, ಸಾಮ್ಯಾಸ್ಪದನ.

**ರಾಜವೃತ್ತವು ಅಷ್ಟವಿಧ**—ದುಷ್ಟನಿಗ್ರಹ, ಶಿಷ್ಟಪ್ರಜಾಪಾಲನ, ದಾನ, ಯಜನ, ದ್ರವ್ಯ

ಸಂಗ್ರಹಣ (ನ್ಯಾಯೋಪಾರ್ಜಿತ,) ಶತ್ರುರಾಜರನ್ನುಮರ್ದಿಸುವಿಕೆ, ಸುತ್ತಣದೇಶಗಳನ್ನು ಹಿಡಿದು ರಾಜ್ಯವನ್ನು ವಿಸ್ತರಿಸುವಿಕೆ, ಆಶ್ರಿತರಾಜರಿಂದ ಕಪ್ಪವಸೂಲಿಮಾಡುವಿಕೆ, (ಶುಕ್ರನೀತಿ.)

**ವರ್ಣೋತ್ಪತ್ತಿ ಸ್ಥಾನಾಷ್ಟಕ**—ಕೊರಳು, ತಾಲುಗೆ, ಜಿಹ್ವಾಮೂಲ, ಉರ, ಶಿರ, ದಂತ, ಓಷ್ಠ, ನಾಸಿಕ (ವ್ಯಾ—ಕೇಶಿರಾಜ.)

**ವೇದಶಿಕ್ಷಾವಿಧಾನಾಷ್ಟಕ**—ಜಟಾ, ಮಾಲಾ, ಶಿಲಾ, ಲೇಖ, ಧ್ವಜ, ದಂಡ, ರಥ, ಘನ

**ಶಾಲಗ್ರಾಮಪೂಜಾಷ್ಟಾಂಗ**—ಚಂದನ, ತುಲಸಿ, ಜಲ, ಶಂಖ, ಘಂಟಾ, ಶಾಲಗ್ರಾಮ, ತಾಮ್ರಪಾತ್ರೆ, ಪುರುಷಸೂಕ್ತಾದಿ.

**ಸಾಧನಾಷ್ಟಾಂಗಗಳು**—ಸತ್ಯವಿಶ್ವಾಸ, ಉಚ್ಛಲಕ್ಷ್ಯ, ನಮ್ರವಚನ,ಸದಾಚಾರ, ಸದ್ವೃತ್ತಿ, ಸದ್ಗುಣಸ್ಥಿತಿ, ಸದುಪಯೋಗಬುದ್ಧಿ, ಸತ್ಧ್ಯಾನ. (ಬೌ.)

**ಸೈನ್ಯಾಷ್ಟಾಂಗಗಳು**—ಆನೆ. ಕುದುರೆ, ರಥ, ಕಾಲಾಳು, ಧನ, ಆಯುಧ, ಯಂತ್ರ ವಿಶೇಷ, ಕೋಟೆಕೊತ್ತಲಗಳು.

**ಸೌಭಾಗ್ಯಾಷ್ಟಕ**— (1) ಕುಂಕುಮ, ಚಂದನ, ಪುಷ್ಪ, ತಾಂಬೂಲ, ಲವಣ, ಜೀರಕ, (ಕೇಸರ) ಇಕ್ಷು, ಕಜ್ಜಲ. (2)ಕುಸುಂಭ, ಗೋ ಕ್ಷೀರ, ಇಕ್ಷು, ಲವಣ, ಕುಸುಮ, ನಿಷ್ಪಾವ, ತರುರಾಜ, ರಾಜಧಾನ್ಯ.

**ನವಖಂಡ**—ಕುರು, ಹಿರಣ್ಮಯ, ರಮ್ಯಕ, ಹರಿವರ್ಷ, ಇಳಾವೃತ, ಭದ್ರಾಶ್ವ, ಕೇತುಮಾಲ್ಯ, ಕಿಂಪುರುಷ, ಅಜನಾಭ (ಭಾರತ). ದೇವರು:—ವರಾಹ, ಕೂರ್ಮ. ಮತ್ಸ್ಯ, ನೃಸಿಂಹ, ವಿವಸ್ವಾನ್, ಹಯಗ್ರೀವ, ಕಾಮ, ರಾಮಾಂಜನೇಯ, ನರನಾರಾಯಣ, (ಶಿವ). ವರ್ಷಾಚಲ:—ಶೃಂಗ, ಶ್ವೇತ, ನೀಲ, ನಿಷಧ, ಪಾರಿಯಾತ್ರ, ಮಾಲ್ಯವಂತ, ಗಂಧಮಾದನ; ಹೇಮ; ಹಿಮವಾನ್. ವರ್ಣ:—ಚಿತ್ರ; ಕೃಷ್ಣ; ಕನಕ; ಪೀತ; ಶ್ವೇತ; ರಕ್ತ; ಪೀತ; ಕನಕ; ಶಬಲ.

**ನವಗ್ರಹ**— 1. ಸೂರ್ಯ (ಭಾಸ್ವನ್) 2. ಚಂದ್ರ(ಸುಧಾನಿಧಿ) 3. ಮಂಗಳ(ಲೋಹಿತ) 4. ಬುಧ(ಸೌಮ್ಯ) 5. ಗುರು(ವಾಚಸ್ಪತಿ) 6. ಶುಕ್ರ(ಗೌರವಾರ್ಹ) 7. ಮಂದ(ಶನಿ) 8. ರಾಹು(ಗತಿಕಾರ) 9. ಕೇತು(ನಿರ್ಮೋಹ) ಜಾತಿ— 1-3 ಕ್ಷತ್ರ. 2-4 ವೈಶ್ಯ 5-6. ದ್ವಿಜ 7. ಶೂದ್ರ 8-9. ಚಂಡಾಲ. ನೀಚೋಚ್ಛರಾಶಿ -1 ಮೇಷ-ತುಲಾ, 2 ವೃಷ-ವೃಶ್ಚಿಕ. 3. ಮಕರ-ಕರ್ಕಿ, 4. ಕನ್ಯಾ-ಮೀನ, 5. ಕರ್ಕಿ-ಮಕರ, 6. ಮೀನ-ಕನ್ಯಾ, 7. ತುಲಾ-ಮೇಷ, 8. ಮಿಥುನ-ಧನು, 9 ದನು-ಮಿಥುನ. ಕಾರಕತ್ವ:—ಪಿತೃ; ಮಾತೃ, ಭ್ರಾತೃ. ಪ್ರಜ್ಞಾ, ಪುತ್ರ, ಕಳತ್ರ, ಆಯು, ವಿಷ, ಕೃತ್ರಿಮ. ಇವರ ದಶಾ ಕಾಲ:—6, 10, 7, 17, 16, 20, 19, 18, 7, ವರ್ಷಗಳು. ಆರಾಧ್ಯದೇವತೆ—ಶಿವ, ದುರ್ಗಿ, ಸ್ಕಂಧ, ವಿಷ್ಣು, ರುದ್ರ, ದುರ್ಗಾ, ತ್ರಿಮೂರ್ತಿಗಳು, ಸುಬ್ರಹ್ಮಣ್ಯ,

ಗಜಾನನ, (ಜೊ.)

**ನವಚಕ್ರ**— ಪಟ್ಚಕ್ರಗಳು; ಸಹಸ್ರಾರ, ಶಿಖಾ, ಪಶ್ಚಿಮ,

**ನವತಾರಾಬಲ**— ಜನ್ಮ, ಸಂಪತ್, ವಿಪತ್, ಕ್ಷೇಮ, ಪ್ರತ್ಯಕ್, ಸಾಧನ, ವಧಾ, ಮಿತ್ರ, ಪರಮಮೈತ್ರ. ಅಧಿಪತಿ—ರವಿ, ಬುಧ, ರಾಹು, ಗುರು, ಕೇತು, ಚಂದ್ರ, ಶುಕ್ರ, ಅಂಗಾರಕ. ವಾಹನಗಳು— ಮಯೂರ, ಅಶ್ವ, ಮೇಷ, ಗಜ, ಕಾಕ, ಜಂಬುಕ, ಸಿಂಹ, ಗರುಡ, ಹಂಸ, (ಜ್ಯೊ— ಶಾ)

**ನವತುಷ್ಟಿಗಳು**— ಪ್ರಕೃತ್ಯಾಖ್ಯತುಷ್ಟಿ (ತತ್ವಜ್ಞಾನದಿಂದ ಮುಕ್ತನಾದನೆಂಬ ತಿಳಿವು) ಉಪಾದಾನಾಖ್ಯ (ತತ್ವದ್ವಾರಾ ಸಂತೋಷಪಡುವುದು) ಕಾಲಾಖ್ಯ (ಆಗುವುದೆಲ್ಲಾ ಸಿದ್ಧಿಸುವುದೆಂದು ಸುಮ್ಮನಿರುವಿಕೆ) ಭಾಗ್ಯಾಖ್ಯ (ಅದೃಷ್ಟವಶದಿಂದಾಗುವುದೆಂಬ ನಿಶ್ಚಿತ ಬುದ್ಧಿ) ಸಂತಾರ (ಅರ್ಥಾರ್ಜನೆಯಲ್ಲಿ ವಿರಕ್ತಿ) ಸುಪಾರ (ಧನಲಭಿಸಿದರೂ ಅಲಕ್ಷದಿಂದಿರುವಿಕೆ) ಸುನೇತ್ರ (ಧನಕ್ಷಯವಾದರೂ ಚಿಂತಿಸದಿರುವಿಕೆ) ಮಾರೀಚಕ (ಉಪಭೋಗಪದಾರ್ಥದಲ್ಲಿ ಇಚ್ಛಾವಿರಕ್ತಿ) ಉತ್ತಮಾಂಭತುಷ್ಟಿ (ಯಾವವಸ್ತುವನ್ನೂ ಅನುಭವಿಸಬೇಕೆಂಬ ಆಶೆಯೇ ಇಲ್ಲದಿರುವಿಕೆ)

**ನವದ್ವಾರ**— ಕಣ್ಣುಗಳೆರಡು, ಕಿವಿಗಳೆರಡು, ನಾಸಾಪುಟಗಳೆರಡು, ಮುಖ, ಗುದ, ಉಪಸ್ಥ

**ನವದುರ್ಗಾ**— 1) ಶೈಲಸುತಾ, ಬ್ರಹ್ಮಚಾರಿಣಿ, ಚಂದ್ರಘಂಟಾ, ಕೂಷ್ಮಾಂಡಾ, ಸ್ಕಂಧಮಾತಾ, ಕಾತ್ಯಾಯಿನಿ, ಕಾಲರಾತ್ರಿ. ಮಹಾಗೌರಿ, ಸಿದ್ಧಿಧಾತ್ರಿ. (2) ಕಾಳಿ, ಕಾತ್ಯಾಯಿನಿ, ಈಶಾನಿ, ಚಾಮುಂಡಾ, ಮರ್ಧಿನಿ, ಭದ್ರಕಾಳಿ, ಭದ್ರಾ, ತ್ವರಿತಾ, ವೈಷ್ಣವಿ. (ಸ್ಕಂಧ— ಪು.)

**ನವದ್ರವ್ಯ**— ಕಾಲ, ಕ್ಷೇತ್ರ, ಆತ್ಮ, ಬುದ್ಧಿ, ಪಂಚಭೂತಗಳು. (ವೈಶೇಷಿಕ)

**ನವಧಾನ್ಯ**— ಗೋಧಿ, ಬತ್ತ, ತೊಗರಿ, ಹೆಸರು, ಕಡಲೆ, ಅವರೆ, ಎಳ್ಳು, ಉದ್ದು, ಹುರುಳಿ.

**ನವನಾಥರು**—ಸತ್ಯ, ಅಶೋಕ, ಆದಿನಾಥ, ಅನಾದಿನಾಥ, ಅಕುಲಿತ, ಮಾತಂಗ, ಮಚ್ಛೇಂದ್ರ, ಘಟಯಂತ್ರ, ಗೋರಕ್ಷನಾಥ.

**ನವನಿಧಿಗಳು**— 1. ಪದ್ಮ 2. ಮಹಾಪದ್ಮ 3. ಮಕರ 4. ಕಚ್ಛಪ 5. ಮುಕುಂದ 6. ನಂದಕ 7. ಶಂಖ 8. ನೀಲ 9. ಖರ್ವ. ದ್ರವ್ಯಗಳು— 1. ಸರ್ಣಾದಿತೈಜಸ 2. ಪದ್ಮರಾಗಾದಿರತ್ನರಾಶಿ 3. ಅಸ್ತ್ರಶಸ್ತ್ರಾದಿ 4. ವ್ಯಾವಹಾರಿಕವಸ್ತು ಪೂರ್ಣ 5. ವಾದ್ಯಾದಿಗಳು 6. ಧನಧಾನ್ಯಗಳು 7. ಭೋಗಪದಾರ್ಥಗಳು 8 ಫಲಮೂಲಾದಿಗಳು. ಗುಣ:-1, 2 ಸತ್ವಗುಣ 2, 4 ತಮೋಗುಣ 5 ರಜೋಗುಣ 6.7 ರಜಸ್ತಮ 8. ರಜಸ್ಸತ್ವ (ವ್ಯಕ್ತಿ ಗುಣಕನುಸಾರ ದ್ರವ್ಯಸಿದ್ಧಿಸುವುದು. ಬ್ರಹ್ಮ. ಪು)

**ನವನಿಧಿಗಳು**— (ಜೈ. ಪು) ಕಾಳ, ಮಹಾಕಾಳ, ನೈಸರ್ಪ, ಪಾಂಡುಕ, ಪದ್ಮ, ಪಿಂಗಳ ಮಾಣವಕ, ಶಂಖ ಸರ್ವರತ್ನ.

**ನವಪದಿ**—(ಸರಸ್ವತೀಪರ) ನ್ಯಾಯ, ಸಾಂಖ್ಯ, ಯೋಗ, ಪಾಂಚರಾತ್ರ, ಪಾಶುಪತ, ಆಯುರ್ವೇದ, ಧನುರ್ವೇದ, ಮೀಮಾಂಸಗಳೆರಡು (ವೇದಾಂತ.)

**ನವಬ್ರಹ್ಮರು**—ಅತ್ರಿ, ಭೃಗು, ಪುಲಹ, ಪುಲಸ್ತ್ಯ, ಕ್ರತು, ದಕ್ಷ, ಅಂಗಿರಸ, ಮರೀಚಿ, ವೃದ್ಧವಸಿಷ್ಠ. 1. ಜನ್ಮಸ್ಥಾನ— ಬಹ್ಮನ— ಕಿವಿ, ಹೃದಯ, ವ್ಯಾನ, ಉದಾನ—ಅಪಾನ, ಪ್ರಾಣವಾಯು, ಶಿರ, ನೇತ್ರ ಸಮಾನಪ್ರಾಣ. 2 ಮತಬೇದ—ನೇತ್ರ,ಚರ್ಮ, ನಾಭಿ, ಕಿವಿ, ಕರತಲ, ಉಂಗುಟ, ಮುಖ, ಮನಸ್ಸು, ಪಾದ.

**ನವಭಾಗವತರು**—ಪರೀಕ್ಷಿತ, ಶುಕ, (ವಾ ನಾರದ) ಪ್ರಹ್ಲಾದ, ಲಕ್ಷ್ಮಿ ಪೃಥು, ಅಕ್ರೂರ, ಆಂಜನೇಯ, ಅರ್ಜುನ, ಬಲಿ, (ಒಂದೊಂದೇ ಭಕ್ತಿಮೂಲಕ, ಧನ್ಯ ಪ್ರಸಿದ್ಧ ರಾದರು.)

**ನವಯೋಗಿಗಳು**—ಕವಿ, ಹರಿ, ಅಂತರಿಕ್ಷ, ಪ್ರವೃದ್ಧ, ಪಿಪ್ಪಲಾಯನ, ಆವಿರ್ಹೋತ್ರ, ದ್ರುಮಿಳ, ಚಮಸ, ಕರಭಾಜನ (ಭಾಗವತ—ಪು)

**ನವರತ್ನ**—ವಜ್ರ, ವೈಡೂರ್ಯ, ಮಾಣಿಕ್ಯ, ಮರಕತ, ಗೋಮೇಧಿಕ, ಪುಷ್ಯರಾಗ, ನೀಲ, ಪ್ರವಾಳ, ಮೌಕ್ತಿಕ, (ಇಂದ್ರ ನೀಲ, ಮಹಾನೀಲ, ಪದ್ಮರಾಗ, ಸೂರ್ಯಕಾಂತ) ಚಂದ್ರಕಾಂತ, ಪುಲಕ, ಉತ್ಪಲ, ಕರ್ಕೇತನ, ರಾಜಪಟ್ಟ, ರಾಜಮಯ, ಶಂಖ, ರುಧಿರಾಕ್ಷ, ಭಲ್ಲಾತಕ ಗಿರಿವಜ್ರ, ಭುಜಗಮಣಿ, ವಜ್ರಮಣಿ, ಚಿಟ್ಟಿಭ, ಪಿಂಡ, ಭ್ರಾಮರ ಇತ್ಯಾದಿ ರತ್ನಭೇಧಗಳಿವೆ.)

**ನವರತ್ನಗಳು**—(ವಿಕ್ರಮಾದಿತ್ಯನ ಆಸ್ಥಾನದ ಕವಿಗಳು) ಧನ್ವಂತರಿ ಕ್ಷಪಣಕ, ಶಂಕು, ವೇತಾಲಭಟ್ಟ, ವರಾಹಮಿಹಿರ, ಕಾಳಿದಾಸ, ಅಮರಸಿಂಹ, ಘಟಕರ್ಪರ, ವರರುಚಿ.

**ನವರಸ**—ಶೃಂಗಾರ (ಸಂಭೋಗ —ವಿಪ್ರಲಂಭ) ವೀರ, ಕರುಣ, ಅದ್ಭುತ, ಹಾಸ್ಯ, ಭಯಾನಕ, ರೌದ್ರ, ಭೀಭತ್ಸ, ಶಾಂತ. ಅಧಿಪತಿಗಳು - ಹರಿ, ಇಂದ್ರ, ಅಂತಕ, ವಿನಾಯಕ, ಮೃತ್ಯು, ರುದ್ರ. ನಂದಿ, ಮಹಾಕಾಳ ಪರಬ್ರಹ್ಮ. ವರ್ಣ—ಹರಿತ,ಗೌರ, ಶ್ವೇತ, ಧೂಮ, ಆರಕ್ತ, ಕೃಷ್ಣ, ಸ್ಫಟಿಕವರ್ಣ, ಶ್ಯಾಮ ಕಾಂಚನ,

**ನವಲಬ್ಧಿ**—(ಕ್ಷಾಯಿಕ) ಸಮ್ಯಕ್ತ್ವ, ಚಾರಿತ್ರ, ಜ್ಞಾನ, ದರ್ಶನ, ದಾನ, ಲೋಭ,ಭೋಗ, ಉಪಭೋಗ. ವೀರ್ಯ, (ಜೈ.)

**ನವವಿಧಕರ್ಮ**—ಸ್ನಾನ, ಸಂಧ್ಯಾಜಪ, ಹೋಮ, ಸ್ವಾಧ್ಯಾಯ, ದೇವತಾರ್ಚನೆ, ಬಲಿ, ವೈಶ್ವದೇವ, ತರ್ಪಣ ಅತಿಥಿ ಸತ್ಕಾರ,(ಬ್ರಾಹ್ಮಣ.)

**ನವವಿಧ ಕಾಲಗಣನ**—ಬ್ರಾಹ್ಮ, ದೈವ, ಪಿತೃ. ಪ್ರಾಜಾಪತ್ಯ, ಗುರು, ಸೌರ, ಸಾವನ. ಚಾಂದ್ರ, ನಾಕ್ಷತ್ರ.

**ನವವಿಧ ಗುಣವಿಭಾಗ**—ಸುಖ, ದುಃಖ, ರಾಗ, ದ್ವೇಷ, ಬುದ್ಧಿ, ಭಾವನಾ, ಪ್ರಯತ್ನ, ಧರ್ಮ, ಅಧರ್ಮ.

**ನವವಿಧ ದೇವಗಣ**—ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು, ಮಹಾರಾಜರು ಪುರೂರವಾದಿ (10) ವಿಶ್ವದೇವರು, ತುಷಿತರು (36) ಭಾಸ್ವರರು (64) ಸಾಧ್ಯರು, (12) ಅನಿಲರು (49)

**ನವವಿಧ ಪ್ರಪಂಚ**—ಪ್ರಾಣಪಂಚಕ, ಜ್ಞಾನೇಂದ್ರಿಯಪಂಚಕ, ಕರ್ಮೇಂದ್ರಿಯಪಂಚಕ, ಭೂತಪಂಚಕ, ಕರಣಚತುಷ್ಟಯ, ಸ್ಥೂಲದೇಹ, ಅವಸ್ಥಾತ್ರಯ, ಅಜ್ಞಾನ.

**ನವವಿಧಪ್ರಾಣಾಯಾಮಪ್ರಕಾರ**— ಅನುಲೋಮವಿಲೋಮ, ಸೂರ್ಯಭೇದಿ, ಉಜ್ಜಾಯಿ, ಸೀತ್ಕಾರೀ, ಶೀತಲೀ, ಭಸ್ತ್ರಾ, ಭ್ರಾಮರೀ, ಮೂರ್ಛಾ, ಪ್ಲಾವಿನಿ, (ಯೋಗ—ಶಾ)

**ನವವಿಧಭಕ್ತಿ**—ಶ್ರವಣ, ಕೀರ್ತನ, ಹರಿ (ಹರ) ಸ್ಮರಣ, ಪಾದಸೇವನ, ಅರ್ಚನಾ, ವಂದನ, ದಾಸ್ಯ, ಸಖ್ಯ, ಆತ್ಮ ನಿವೇದನ.

**ನವವಿಧ ಯೋಗಾಂತರಾಯ**—(ಪ್ರತಿಬಂಧಕಗಳು) ವ್ಯಾಧಿ, ಸ್ತ್ಯಾನ (ಅನರ್ಹತೆ) ಸಂಶಯ, ಪ್ರಮಾದ, ಆಲಸ್ಯ, ಅವಿರತಿ, ಭ್ರಾಂತಿದರ್ಶನ,ಅಲಬ್ಧಭೂಮಿಕತ್ವ, ಅನವಸ್ಥಿತತ್ವ (ಸ್ಖಲಿತಲಕ್ಷ್ಯ)

**ನವವಿಧ ಲಿಂಗಭೇದ**—ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕ, ಪುಂಸ್ತ್ರೀಲಿಂಗ, ಪುನ್ನಪುಂಸಕ, ಸ್ತ್ರೀನಪುಂಸಕ, ತ್ರಿಲಿಂಗ, ವಾಚ್ಯಲಿಂಗ, ಅವ್ಯಯಲಿಂಗ (ವ್ಯಾ—ಕೇಶಿರಾಜ)

**ನವವಿಧ ವಿಷವಿಶೇಷ**—ಕಾಲಕೂಟ, ಹಾಲಾಹಲ, ಕಾಕೋಲ, ಶೌಕ್ಲಿಕ, ಸೌರಾಷ್ಟ್ರಕ, ಬ್ರಹ್ಮಪುತ್ರ, ಪ್ರದೀಪನ, ದಾರದ, ವತ್ಸನಾಭ.

**ನವವಿಧ ಶೃಂಗಾರದ್ರವ್ಯ**—ಪುಣುಗು, ಕಸ್ತೂರಿ, ಜವಾದಿ, ಕಚೋರ, ಪಚ್ಚೆಕರ್ಪೂರ, ಕುಂಕುಮಕೇಸರಿ, ನಖ, ಚಂದನ, ಗಂಧ.

**ನವವಿಧಾಸನ**—ಸ್ವಸ್ತಿಕ, ಗೋಮುಖ, ಬ್ರಹ್ಮ, ವೀರ, ಭದ್ರ, ಮುಕ್ತಾ, ಮಯೂರ, ಬಂಧಕ, ಸುಖಾಸನ (ಸಿದ್ಧಾಸನ.)

**ನವಶಕ್ತಿ**—(1) ವಿಭೂತಿ ಉನ್ನತಿ, ಕಾಂತಿ, ಕೀರ್ತಿ, ಸನ್ನತಿ, ಸೃಷ್ಟಿ, ವೃಷ್ಟಿ, ಸತ್ಯಸೃಷ್ಟಿ, ಋದ್ಧಿ. (2) ತೀವ್ರ, ಜ್ವಾಲಿನಿ, ನಂದಾ, ಭೋಗದಾ, ಕಾಮರೂಪಿಣಿ, ಉಗ್ರಾ, ತೇಜೋವತಿ, ಸತಿ, ವಿಘ್ನಹಂತ್ರಿ (ಈಶ್ವರೀಯ) (3) ಸಪ್ತಮಾತೃಕೆಯರು, ನಾರಸಿಂಹಿ, ಶಿವದೂತಿ (ಶಕ್ತಿಪರ) (4) ವಿಮಲಾ, ಉತ್ಕರ್ಷಿಣಿ, ಜ್ಞಾನ, ಕ್ರಿಯಾ, ಯೋಗ,ಪ್ರಹ್ವೀ, ಸತ್ಯ, ಈಶಾನ, ಅನುಗ್ರಹ (ಭಗವತ್ ಶಕ್ತಿಗಳು)

**ನವಸರ್ಗಗಳು**—ಪ್ರಾಕೃತ 3 ವಿಧ— ಮಹತ್ಸೃಷ್ಟಿ (ಪರಬ್ರಹ್ಮಕೃತ) ಭೂತಸರ್ಗ(ಭೂತ-ತನ್ಮಾತ್ರೆಗಳು) ವೈಕಾರಿಕ (ಇಂದ್ರಿಯಗಳು) ವೈಕಾರಿಕ 5 ವಿಧ— ಮುಖ್ಯಸರ್ಗ (ಸ್ಥಾವರ ಸೃಷ್ಟಿ) ತಿರ್ಯಕ್ ಸೃಷ್ಟಿ, ದೇವಸರ್ಗ (ಊರ್ಧ್ವಸ್ರೋತಸ್ಸುಗಳು) ಮಾನವ,

ಸರ್ಗ (ಅರ್ವಾಕ್‌ಸ್ರೋತಸ್ಸುಗಳು) ಅನುಗ್ರಹಸರ್ಗ (ತಮಸ್ಸತ್ವ ಸ್ವಭಾವವುಳ್ಳ ದೇವ ಸೃಷ್ಟಿ) ಪ್ರಾಕೃತವೈಕೃತ— ಕೌಮಾರಸೃಷ್ಟಿ (ರುದ್ರಸನಕಾದ್ಯರ ಸೃಷ್ಟಿ.(ಇವೆಲ್ಲಾ ಬ್ರಹ್ಮನ ಜಗತ್ಸೃಷ್ಟಿಗೆ ಮೂಲಕಾರಣಗಳು) ವಿಷ್ಣು — ಪು.

**ನವಾನುಲೇಪನ**— ಚಂದನ, ಮಲಯಜ, ದೇವದಾರು, ಕುಂಕುಮ, ಮನಃಶಿಲಾ, ಶಂಖ ಪಿಷ್ಟ, ತಿಲಪಿಷ್ಟ, ಕಸ್ತೂರಿ, ಕೇತಕೀರಜ (ಮಂತ್ರ—ಶಾ)

**ನವಾವಸ್ಥೆ** (ಶಾರೀರಿಕ)— ನಿಷೇಕ, ಗರ್ಭ, ಜನನ, ಬಾಲ್ಯ, ಕೌಮಾರ್ಯ, ಯವ್ವನ; ವಯೋಮಧ್ಯ, ಜರಾ, ಮರಣ.

**ಸೇನಾವಿಭಾಗಗಳು**— ಪತ್ತಿ, ಸೇನಾಮುಖ, ಗುಲ್ಮ, ಗಣ, ವಾಹಿನಿ, ಪೃತನೆ, ಚಮೂ, ಅನೀಕಿನಿ, ಅಕ್ಷೋಹಿಣಿ, (1 ಆನೆ, 1 ರಥ, 3 ಕುದುರೆ 5 ಕಾಲಾಳಿಗೆ ಒಂದು ಪತ್ತಿ. ಇವು ಕ್ರಮದಂತೆ ಮುಮ್ಮಡಿಯಾಗುತ್ತಾ ಹೋಗಿ 10 ಅನೀಕಿನಿಯಾದಾಗ ಒಂದಕ್ಷೋಹಿಣಿ)

**ಸೂ:— ಸೇನಾಧಿಕಾರಿ ವಿಭಾಗ**— ಪತ್ತಿಪಾಲ (ಐದಾರು ಜನರಿಗೆ) ಗೌಲ್ಮಿಕ (30ಕ್ಕೆ ಮಿಕ್ಕಿದ ಜನರಿಗೆ) ಶತಾನೀಕ(ನೂರು ಮಂದಿಗೆ) ಅನುಶತಿಕ, ವರ, ಸೇನಾನಿ, ಲೇಖಕ, ಸಾಹಸ್ರಿಕ, ಅಯುತಿಕ (ವರ್ಗಾವರ್ಗಿ ಮಾಡುವವ ಪದಾತಿಪ)

**ದಶಕರ್ಮಗಳು**— ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರಣ, ಉಪನಯನ,ವಿವಾಹ. ಬಿಂದುಸ್ವಾಯತ್ರ- ಸ್ನಾನವಿಧಿ, ಸಂಧ್ಯಾನ, ಜಪ, ಉಪಸ್ಥಾನ, ಆರ್ಜವ, ಔಪಾಸನ, ಯಜನ, ದಾನ, ಅತಿಥಿಪೂಜೆ, ಬ್ರಹ್ಮಯಜ್ಞ (ಶೈ.).

**ದಶಕಾಮಜವ್ಯಸನ**— ದ್ಯೂತ, ಮೃಗಯಾ, ದಿವಸ್ವಾಪ, ವ್ಯರ್ಥವಿಹಾರ, ವಿಷಯಾಸಕ್ತಿ, ನೃತ್ಯ, ಸಂಗೀತ, ಕಾಪಟ್ಯ, ಕೇಳಿ, ಮದಾಂಧತ್ವ.

**ದಶಜ್ಯೋತಿಷ**— (ಅಗ್ನಿದಶಕಲೆಗಳು) ಧೂಮ್ರಾರ್ಚಿ, ಊಷ್ಮಾ, ಜ್ವಲಿನಿ, ವಿಸ್ಫುಲಿಂಗಿನಿ, ಜ್ವಾಲಿನಿ, ಸುಶ್ರೀ, ಕಪಿಲ, ಸುರೂಪ, ಹವ್ಯವಹ, ಕವ್ಯವಹ.

**ದಶದಾನಗಳು**— ಗೋ; ಭೂ; ತಿಲ; ಹಿರಣ್ಯ; ರಜತ; ಆಜ್ಯ; ವಸನ; ವ್ರೀಹಿ; ಗುಡ; ಲವಣ ದಾನ. (ಗುಡ; ಲವಣಕ್ಕೆ ಕನ್ಯಾ ತಾಂಬೂಲ ಎಂದುಂಟು)

**ದಶದಿಕ್**— ಅಷ್ಟದಿಕ್ಕುಗಳು; ಊರ್ಧ್ವ, ಅಧಸ್ಥಳ.

**ದಶದಿಗ್ಯೋಗಿನಿಯರು**— ವಜ್ರಿನಿ; ಶಕ್ತಿನಿ; ದಂಡಿನಿ;ಖಡ್ಗಿನಿ, ಪಾಶಿನಿ; ಧ್ವಜಿನಿ; ಗದಿನಿ; ಶೂಲಿನಿ; ಪವಿನಿ; ಚಕ್ರಿನಿ.

**ದಶದೇವಯೋನಿಗಳು**— ಸಿದ್ಧ; ವಿದ್ಯಾಧರ; ಕಿನ್ನರ; ಗಂಧರ್ವ; ಅಪ್ಸರಾ; ಯಕ್ಷ; ರಾಕ್ಷಸ; ಗುಹ್ಯಕ; (ಕೋಶರಕ್ಷಕ) ಭೂತ; ಪಿಶಾಚ.

**ದಶದೋಷಗಳು**— (ವ್ಯಾವಹಾರಿಕ) ಕೊಲೆ, ಕಳವು, ಹಾದರ, ಸುಳ್ಳು, ಹಂಗಣೆ, (ನೋಯಿಸುವ ಮಾತು) ಪರುಷೋಕ್ತಿ, ದುಷ್ಟತನ, ಭಗವದ್ಭಕ್ತಿ ಶೂನ್ಯತೆ, ನಾಸ್ತಿಕತೆ ಪಾಪಕರ್ಮ (ಇವಿಲ್ಲದಿದ್ದರೆ ಸದಾಚಾರ)

**ದಶಧರ್ಮಗಳು**—(1) ಸತ್ಯ, ತಪ, ತ್ಯಾಗ, ಶೌಚ, ಕ್ಷಮಾ, ಮಾರ್ದವ, ಆರ್ಜವ, ಸಂಯಮ ಅಕಿಂಚನ್ಯ, ಬ್ರಹ್ಮಚರ್ಯೆ (ಜೈ) (2) ಧರ್ಮಲಕ್ಷಣಗಳು— ಸತ್ಯ, ಶೌಚ, ಅಸ್ತೇಯ ಧೃತಿ, ಅಕ್ರೋಧ, ಕ್ಷಮೆ, ದಮ, ವಿದ್ಯಾ, ಬುದ್ಧಿ, ಇಂದ್ರಿಯನಿಗ್ರಹ.

**ದಶಧರ್ಮಾಧ್ಯಯನ**— ಛಾತ್ರರು— ಸಾಧು, ಶುಚಿ, ಆಪ್ತ, ಧಾರ್ಮಿಕ, ಸೇವಾತತ್ಪರ; ಆಚಾರ್ಯಪುತ್ರ, ಶಕ್ತ (ಬದ್ಧಲಕ್ಷ್ಯ) ಅರ್ಥದಾಯಿ, ಜ್ಞಾನದಾಯಿ, ಸ್ವಾಧ್ಯಾಯಿ.

**ದಶನಾಡಿಗಳು**— ಇಡಾ, ಪಿಂಗಳ, ಸುಷುಮ್ನಾ ಗಾಂಧಾರಿ, ಹಸ್ತಿ, ಜಿಹ್ವಾ, ಪಯಸ್ವಿನಿ, ಪೂಷ, ಕುಹೂ, ಶಂಕಿನಿ.

**ದಶನಾದಗಳು**— ಛಿಣಿಲು, ಚಿಣಿಚಿಣಿ, ಘಂಟೆ, ಶಂಖ, ವೀಣೆ, ತಾಳ, ವೇಣು, ಭೇರಿ, ಮೃದಂಗ, ಮೇಘನಾದ (ಘೋಷ, ರಾವ, ಸ್ವನ, ಶಬ್ದ, ಆಸ್ಫೋಟ, ಧ್ವನಿ, ಕೇಂಕಾರ, ಹುಂಕೃತಿ— ಇವು ಅಷ್ಟಮಂಗಲ)

**ದಶಪದಾರ್ಥಭೇದ**— ಚೇತನ; ಅಚೇತನ; ಜಾತಿ; ಗುಣ; ಕ್ರಿಯಾ; ವಿಶೇಷ್ಯ; ವಿಶೇಷತ್ವ; ಅಂಶೀ; ಶಕ್ತಿ; ಸಾದೃಶ್ಯ; ಅಭಾವ. (ದ್ವೈ)

**ದಶಪುರಾಣ ಲಕ್ಷಣಗಳು**—(1) ಸರ್ಗ; ಪ್ರತಿಸರ್ಗ; ವೃತ್ತಿ; ರಕ್ಷೆ; ಮನ್ವಂತರ; ವಂಶ; ವಂಶಾನುಚರಿತ; ಸಂಸ್ಥಾ; ಹೇತು; ಅಪಾಶ್ರಯ. (2) ಸರ್ಗ; ವಿಸರ್ಗ; ಸ್ಥಾನ; ಪೋಷಣೆ; ಗತಿ; ಮನ್ವಂತರ, ಅವತಾರ; ನಿರೋಧ; ಮುಕ್ತಿಜ್ಞಾನ; ಆಶ್ರಯ. (ಭಕ್ತಿ ಮಾರ್ಗ)

**ದಶಬಲ**— ಬುದ್ಧಿ; ಶೀಲ; ದಾನ; ದಯಾ; ಧ್ಯಾನ; ಕ್ಷಾಂತಿ; ವೀರ್ಯ; ಬಲ; ಜ್ಞಾನ ಉಪೇಕ್ಷೆ. (ಬೌ- ದಯೆ; ಉಪೇಕ್ಷೆಯ ಬದಲು ಉಪಾಯ; ಪ್ರಣಿಧಿ)

**ದಶರೂಪಕ**— 1. ನಾಟಕ 2. ಪ್ರಕರಣ 3. ಬಾಣ 4. ಪ್ರಹಸನ 5. ಡಿಮ 6, ವ್ಯಾಯೋಗ 7. ಸಮವಾಕಾರ 8. ವೀಥಿ 9. ಅಂಕ 10. ಈಹಾಮೃಗ. ಮುಖ್ಯರಸ— 1-2 ಶೃಂಗಾರ-ವೀರ 3 ವೀರ-ಶೃಂಗಾರ (ಸಂಕೇತ) 4 ಹಾಸ್ಯ 5-6 ರೌದ್ರ 7 ವೀರ 8 ಶೃಂಗಾರ 9 ಕರುಣ 10 ಶೃಂಗಾರಾಭಾಸ. ವಸ್ತು— (1-5-6-7) ಪ್ರಖ್ಯಾತ 2-3-4-9) ಕಾಲ್ಪನಿಕ. 10 ಮಿಶ್ರ ನಾಯಕರು— (1-7) ಧೀರೋದಾತ್ತ 2 ಧೀರ ಶಾಂತ 3 ವಿಟ 4 ಪಾಷಂಡ 5 ಉದ್ಧತ-ಯಕ್ಷಾದಿಗಳು 6 ಉದ್ಧತ-ವಿಖ್ಯಾತ (8-9) ಸಾಮಾನ್ಯ 10 ಧೀರೋದ್ಧತ.

**ದಶಲೋಕೇಶ್ವರರು**— ಪ್ರಶ್ನ; ಅನಂತ; ಈಶ್ವರ; ಪಿಂಗಳ; ಕಾಲ; ಕ್ರೋಧೇಶ; ಜಲದ,

ಬಲ; ಧನದ; ಶಂಕರ.

**ದಶವಾದ್ಯ**—ಭದ್ರ (ಕರಡೆ) ಶಾಸಕ (ನಗಾರಿ) ಭೀಷಣ (ತ್ರಾಸಾ) ಘೋಷಣ (ಹುಡುಕ್ಕಾ) ಡಿಂಡಿಮ (ಡಿಕ್ಕಿ) ಡಮರು (ಡೋಲು) ಜರ್ಝರ (ಜಾಯಿ) ಕಾಹಳ (ಗೌರಿಕಾಹಳೆ) ದುಂದುಭಿ (ದೋರರಣವಾದ್ಯ) ಘಂಟಿಕೆ (ಘಂಟೆ)

**ದಶವಿಧ (ಉಪಾಸ್ಯ) ಶಕ್ತಿಗಳು**—ಧೂಮಾವತಿ, ಬಗಲಾ, ಬೈರವಿ, ಛಿನ್ನಮಸ್ತಾ, ಭುವನೇಶ್ವರೀ, ತ್ರಿಪುರ ಸುಂದರಿ, ಉಗ್ರತಾರಿಣಿ, ಮಹಾಕಾಳಿ, ಕಮಲ, ದುರ್ಗಾ (ದಶಾವತಾರ ರೂಪೀ ಮಹಾ ವಿದ್ಯಾಧಿಮಾತೆಯರು. ಮಂತ್ರ. ಶಾ) ಪರತತ್ವಗಳು—ರುದ್ರ, ಮಾತಂಗ, ಏಕಾನನ, ದಕ್ಷಿಣಾಮೂರ್ತಿ, ತ್ರ್ಯಂಬಕ, ಪಂಚಮುಖ ರುದ್ರ, ಅಕ್ಷೋಭ್ಯ, ಮಹಾಕಾಲ, ವಿಷ್ಣು, ಸದಾಶಿವ (ಶಾಕ್ತ).

**ದಶವಿಧ ಕ್ಷತ್ರಲಕ್ಷಣ**—ಶೌರ್ಯ, ವೀರ್ಯ, ಧೃತಿ, ತೇಜ, ಬ್ರಹ್ಮಣ್ಯತಾ, ತ್ಯಾಗ, ಅನುಗ್ರಹ, ಕ್ಷಮಾ, ರಕ್ಷಾ, ಆತ್ಮಜಯ.

**ದಶವಿಧ ಕ್ಷೀರಗುಣ**—ಸ್ವಾದು, ಶೀತಲ, ಮೃದು, ಸ್ನಿಗ್ಧ, ಪ್ರಸನ್ನತ್ವ, ಬಹಲ (ಗಾಢ) ಪಿಚ್ಛಿಲ, ಗುರು, ಮಂದ, ಶ್ಲಕ್ಷ್ಣ (ಸಾತ್ವಿಕ)

**ದಶವಿಧಗಮಕ**—ಆರೋಹಣ, ಅವರೋಹಣ, ಡಾಲು, ಸ್ಫುರಿತ, ಕಂಪಿತ, ಆಹತ, ಪ್ರತ್ಯಾಹತ, ತ್ರಿಪುಚ್ಛ, ಆಂದೋಳ, ಮೂರ್ಛನ (ಸಂ)

**ದಶವಿಧನಾದ**—ಸ್ವರನಿರ್ಘೋಷ, ನಿರ್ಣಯಧ್ವನ, ಘಂಟಾನಾಧ, ಕಹಳಾರವ, ಶಂಖಧ್ವಾನ, ಮೃಡಂಗಸ್ವನ, ಭೇರೀರವ, ಮಂತ್ರಸ್ವರ, ಮೇಘಘರ್ಜನೆ, ಅವ್ಯಕ್ತಪ್ರಣವನಾದ.

**ದಶವಿಧಪಾತಕ ಭೇದ**—ಪಾತಕ, ಅತಿಪಾತಕ, ಉಪಪಾತಕ, ಮಹಾಪಾತಕ, ಪ್ರಾಸಂಗಿಕ, ಜಾತಿಭ್ರಂಶಕ, ಸಂಕೀರ್ಣ, ಪ್ರಕೀರ್ಣ, ಅಪಾತ್ರಕರಣ, ಮಲಾವಹಪಾತಕ.

**ದಶವಿಧ ಮನೋಭಾವ**—ಕಾಮ, ಸಂಶಯ, ಭಯ, ಸಂಕಲ್ಪ, ಶ್ರದ್ಧಾ, ಅಶ್ರದ್ಧಾ, ಧೃತಿ, ಮತಿ, ಅಧೃತಿ, ಲಜ್ಜಾಭಾವ,

**ದಶವಿಧ-ಯಜ್ಞದ್ರವ್ಯ (ದೇವತಾಪ್ರೀತ್ಯರ್ಥಕ)**—ದಧಿ, ಘೃತ, ಕ್ಷೀರ, ಜಲ, ಫಲ, ಯವ, ತೈಲ, ಚರು, ತಂಡುಲ, ಸೋಮಲತೆ.

**ದಶವಿದರಾಗಲಕ್ಷಣ**—ಗ್ರಹ, ಅಂಶ, ಮಂದ್ರ, ತಾರ, ನ್ಯಾಸ, ಉಪನ್ಯಾಸ, ಅಲ್ಪತ್ವ, ಬಹುತ್ವ, ಸನ್ಯಾಸ, ವಿನ್ಯಾಸ (ಸಂ)

**ದಶವಿದ ಶೃಂಗಾರಚೇಷ್ಟೆಗಳು** (ಸ್ತ್ರೀಸ್ವಭಾವ)—ಮೊಟ್ಟಾಯಿತ, ಬಿಬ್ಬೋಕ, ಲಲಿತ, ಲೀಲಾ, ಕಿಲಕಿಂಚಿತ, ವಿಚ್ಛಿತ್ತಿ, ವಿಲಾಸ, ವಿಹೃತ, ವಿಭ್ರಮ, ಕುಟ್ಟಮಿತ (ಆಗಂತುಕ—ಹಾವ,ಭಾವ, ಹೇಳಾ, ಶೋಭಾ, ಕಾಂತಿ, ದೀಪ್ತಿ ಮಾಧುರ್ಯ, ಉದಾತತೆ.)

**ದಶಸಂಸ್ಕಾರ**—ಜನ್ಮ, ಜೀವನ, ತಾಡನ, ಬೋಧನ, ಅಭಿಷೇಚನ, ಶುದ್ಧೀಕರಣ, ಆಪ್ಯಾ,

ಯನ, ತರ್ಪಣ, ದೀಪನ, ಗುಪ್ತಿಸಂಸ್ಕಾರ (ಮಾಂತ್ರಿಕ)

**ದಶಾವತಾರ**—ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ (ತ್ರಿವಿಕ್ರಮ) ಪರಶುರಾಮ, ರಾಮ, ಕೃಷ್ಣ (ಇದು ಪೂರ್ಣಾವತಾರ) ಬುದ್ಧ, ಕಲ್ಕಿ.

**ದಶಾವಸ್ಥೆ**—ಅಭಿಲಾಷೆ, ಚಿಂತೆ, ಸಂಸ್ಮೃತಿ, ಕೀರ್ತನ, ತಾಪನ, ಕ್ರಿಯಾದ್ವೇಷ, ವೈಕಲ್ಯ, ಮೌನ, ಮೂರ್ಛನ, ಮರಣ. ವಿಕಾರ-ಪರಿಣಾಮ—ಕ್ಷೀಣತ್ವ, ಪಾಂಡುರತ್ವ, ಕೃಶತ್ವ, ಅರುಚಿ, ಅಧೃತಿ, ಅನಾಲಂಬ, ತಲ್ಲೀನ, ಉನ್ಮಾದ, ವಿಸ್ಮರಣ, ಮೃತಿ.

**ದಶೋಪಚಾರ**—ಪಾದ್ಯ, ಅರ್ಘ್ಯ, ಗಂಧ, ಪುಷ್ಪ, ದೂಪ, ದೀಪ, ನೈವೇದ್ಯ, ನೀರಾಜನ, ಪುನರಾಚಮನ, ವಂದನ.

**ದಶೋಪನಿಷತ್**—ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ಐತರೇಯ, ತೈತ್ತರೀಯ, ಛಾಂದೋಗ್ಯ, ಬೃಹದಾರಣ್ಯಕ.

**ದಶಾಂಗಕುಜ** (ಭೋಗ ಭೂಮಿಜ ಕಲ್ಪತರುಗಳು)—ಮದ್ಯಾಂಗ, ಭೂಷಣಾಂಗ, ವಸನಾಂಗ, ಮಾಲ್ಯ, ತೂರ್ಯ, ಭಾಜನ, ಭೋಜ್ಯ, ಗೃಹ, ದೀಪ, ಜ್ಯೋತಿರಂಗ ಕುಜ—(ಜೈ—ಪು)

**ದಶಾಂಗದೂಪ**—(1) ದೂಪ, ರಾಳ. ಗುಗ್ಗುಲ, ಗೌಲ, ಚಂದನ, ಕಚ್ಚೂರ, ಘೃತ, ಗಂಧ, ವಜ್ರಸಜಿ, ತುಂಗಿ. (2) ಮಧು, ಘೃತ, ಸರಲ, ಶೈಲಶ್ಚಟ, ಸಿತ, ಸಿದ್ಧಾರ್ಥ, ಗಂಧ, ಮುಸ್ತೆ, ಅಗರು, ಗುಗ್ಗುಲ.

**ಇಂದ್ರಿಯ ದಶಕ**—ಕರ್ಮೇಂದ್ರಿಯ ಪಂಚಕ, ಜ್ಞಾನೇಂದ್ರಿಯ ಪಂಚಕ.

**ಕಾಮದಶಾವಸ್ಥೆಗಳು**—ಚಕ್ಷುಃಪ್ರೀತಿ, ಮನಸ್ಸಂಗ, ಸಂಕಲ್ಪ, ಜಾಗರ, ಕಾರ್ಶ್ಯ, ಅರತಿ, ಲಜ್ಜಾತ್ಯಾಗ, ಮೋಹೋನ್ಮಾದ, ಮೂರ್ಛೆ, ಮರಣ.

**ಕಾವ್ಯದಶಪ್ರಾಣಗಳು**—(ಶಬ್ದಾರ್ಥನಿಷ್ಠ) ಓಜ, ಪ್ರಸಾದ, ಸಮತಾ, ಶ್ಲೇಷ, ಮಾಧುರ್ಯ ಸೌಕುಮಾರ್ಯ, ಔದಾರ್ಯ, ಅರ್ಥವ್ಯಕ್ತಿ, ಕಾಂತಿ, ಸಮಾಧಿ (ಹೀಗೆ 10 ಶಬ್ದಗುಣಗಳು, 10 ಅರ್ಥಗುಣಗಳು ಕಾವ್ಯಕ್ಕೆ ಶೋಭಾಕರಗಳಾಗಿರುತ್ತವೆ. ವಾಮನನಮತ)

**ಕಾವ್ಯದಶಾಲಂಕಾರ ಲಕ್ಷಣಗಳು**—ಅಕ್ಷರ ಸಂಹತಿ, ಶೋಭಾ, ಅಭಿಮಾನ, ಹೇತು, ಪ್ರತಿಷೇಧ, ನಿರುಕ್ತ, ಮಿಥ್ಯಾಧ್ಯವಸಾಯ, ಸಿದ್ಧಿ, ಯುಕ್ತಿ, ಕಾರ್ಯ, (ಜಯದೇವಮತ)

**ಕಾವ್ಯೇಷುದೋಷ ದಶಕ**—ಅಪಾರ್ಥ, ವ್ಯರ್ಥ, ಏಕಾರ್ಥ, ಸಸಂಶಯ, ಅಪಕ್ರಮ, ಶಬ್ದಚ್ಯುತಿ, ಯತಿಭ್ರಷ್ಟ, ವಿಸಂಧಿ, ದೇಶಕಾಲನ್ಯಾಯಾಗಮವಿರೋಧಿ (ಸಾಹಿತ್ಯ ದರ್ಪಣ)

**ನಿಯಮಾಂಗ ದಶಕ**—ಸ್ನಾನ, ಶೌಚ, ತಪ, ಮೌನ, ದಾನ, ವ್ರತ, ಉಪವಾಸ, ಯಜ್ಞ, [illegible].

**ಯಮನಿಯಮಯೋಗಾಂಗ ದಶಕ**— ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ತಪ, ಶೌಚ, ಪ್ರಸಾದ, ಸ್ವಾಧ್ಯಾಯ, ಈಶ್ವರಾರ್ಪಣ.

**ರಾಜಪ್ರಕೃತಿ ದಶಕ**—(ಮುಖ್ಯಾಧಿಕಾರೀವರ್ಗ) 1 ಪುರೋಹಿತ (ಉಚ್ಚತಮ) 2 ಪ್ರತಿನಿಧಿ 3 ಪ್ರಧಾನ 4 ಸಚಿವ 5 ಮಂತ್ರಿ 6 ನ್ಯಾಯಪತಿ 7 ಪಂಡಿತ 8 ಸುಮಂತ್ರ, 9 ಅಮಾತ್ಯ 10 ದೂತ (ಕನಿಷ್ಠತಮ) ಇವರಯೋಗ್ಯತೆ— 1 ಸರ್ವಗುಣ ಸಂಪನ್ನ. ರಾಜ್ಯಾಭಿವೃದ್ಧಿಗೆ ಮುಖ್ಯಕಾರಣ. 2 ಕಾರ್ಯನಿರ್ದೇಶಕ. 3 ಸರ್ವದರ್ಶಿ-ಕಾರ್ಯವಾಹಕ. 4 ಯುದ್ಧ-ವಿದ್ಯಾ ವಿಶಾರದ— ರಾಜಸೇನಾ ವ್ಯವಸ್ಥಾಪಕ. 5 ರಾಜನೀತಿಜ್ಞ--ಮಂತ್ರೋಪಾಯನಿವೇದಕ. 6 ನ್ಯಾಯಧರ್ಮಸೂಕ್ಷ್ಮಜ್ಞ-- ಅಪರಾಧಕ್ಕೆಶಿಕ್ಷೆ ವಿಧಿಸುವಾತ. 7 ಶಾಸ್ತ್ರಜ್ಞ-ಯಥಾರ್ಥಪ್ರತಿಪಾದಕ. 8 ಆಯವ್ಯಯನಿರೀಕ್ಷಕ-ಸನ್ಮಾರ್ಗಸೂಚಕ. 9 ದೇಶಕಾಲಕ್ಕೆ ಸರಿಯಾದ ರಾಜಕಾರ್ಯ ನಿರ್ವಾಹಕ. ಮುಖ್ಯ ಸಂಚಾಲಕ. 10 ಷಡ್ಗುಣ ಸಂಪನ್ನ—ಇತರರ ಮನೋಭಿಪ್ರಾಯ ತಿಳಿದು ಸಂಧಿವಿಗ್ರಹಾದಿವ್ಯವಹಾರ ನಡೆಸುವ ಕಾರ್ಯಕುಶಲ. (ದೂತ-ಪುರೋಹಿತರನ್ನು ಬಿಟ್ಟರೆ ಉಳಿದವರು (ಅಷ್ಟಪ್ರಧಾನರಾಗುವರು) ಶುಕ್ರನೀತಿ.

**ಶಿವಾತ್ಮಕ ಬಿಂದು ದಶವರ್ಣ-ಸಿದ್ಧಿಗಳು**—ವರ್ಣಗಳು- ಸಿತ, ರಕ್ತ, ಕೃಷ್ಣ, ನೀಲ, ಮೇಘ, ಪೀತಲೋಹಿತ, ಪೀತ, ಕಪಿಲ, ಧೂಮ್ರ, ಸ್ಫಟಿಕ. **ಅಧಿಪತಿ**–ಅನಂತೇಶ, ಸೂಕ್ಷ್ಮ ,ಶಿವೋತ್ತಮ, ಏಕಾಕ್ಷ, ಏಕರುದ್ರ, ಮೂರ್ತಿತ್ರಿತಯ, ಶ್ರೀಕಂಠ, ಶಿಖಂಡಿ, ಕಾಲಾಗ್ನಿರುದ್ರ, ಸದಾಶಿವ. **ಲಕ್ಷ್ಯಸಿದ್ಧಿಗಳು** —ನಿರ್ವಿಷಯತ್ವ, ಭೂತೋಪಶಮ, ಪಿಶಾಚಪೀಡಾಪರಿಹಾರ, ಗ್ರಹೋಚ್ಚಾಟನ, ವ್ಯಾಧಿವಿನಾಶನ, ಶತ್ರುಮಾರಣ, ಆಕರ್ಷಣ, ಸಮ್ಮೋಹಣ, ಕಾರ್ಯಸಿದ್ಧಿ, ಪರಮಪದಪ್ರಾಪ್ತಿ (ಶಿವಾಗಮ- ಯೋಗಸಿದ್ಧಾಂತ)

**ಏಕಾದಶ ಕಾಷ್ಠವಿಶೇಷ**—ಜಂಬು, ಅಪಾಮಾರ್ಗ, ಖದಿರ, ಜಾತಿ, ಆಮ್ರ, ಕದಂಬ, ಪ್ಲಕ್ಷ, ಉದಂಬರ, ಬೀಜಪೂರ, ದಾಡಿಮ.

**ಏಕಾದಶ ಕರಣಗಳು**—ಬವ, ಬಾಲವ, ಕೌಲವ, ತೈತಲೆ, ಗರಜೆ, ವಣಜೆ, ಭದ್ರೆ, ಶಕುನಿ, ಚತುಷ್ಪಾತ್, ನಾಗವಾನ್, ಕಿಂಸ್ತುಘ್ನ (ಜ್ಯೋ.ಶಾ)

**ಏಕಾದಶ ಗ್ರಹ**—(1) ಐದು ಕರ್ಮೇಂದ್ರಿಯಗಳು, ಐದು ಜ್ಞಾನೇಂದ್ರಿಯಗಳು, ಮನೋಬುದ್ಧ್ಯಹಂಕಾರ, **ಮಹಾಗ್ರಹ**— ಶಬ್ದಾದಿವಿಷಯ ಪಂಚಕ, ವಚನ, ಆದಾನ, ಗಮನ, ಕರ್ಮ (ಮಲೋತ್ಸರ್ಗ) ರತ್ಯಾನಂದ, ಬೋದ್ಧವ್ಯ-ಮಂತವ್ಯ. (ವೇದಾಂತ)

**ಏಕಾದಶ ರುದ್ರರು**— (1) ಅಜೈಕಪಾದ, ಅಹಿರ್ಬುಧ್ನ್ಯ, ವಿರೂಪಾಕ್ಷ, ರೈವತ, ಹರ, ಬಹುರೂಪ, ತ್ರ್ಯಂಬಕ, ಸುರೇಶ್ವರ, ಸಾವಿತ್ರ-ಜಯಂತ, ಪಿನಾಕಿ, ಅಪರಾಜಿತ(ಮಹಾಭಾರತ) (2) ಹರ, ಬಹುರೂಪ, ತ್ರ್ಯಂಬಕ, ಅಪರಾಜಿತ, ಶಂಭು, ವೃಷಾಕಪಿ, ಕಪರ್ದಿ,

ರೈವತ, ಮೃಗವ್ಯಾಧ, ಶರ್ವ, ಕಪಾಲಿ (ವಿಷ್ಣು-ಪು) (3) ರುದ್ರರೂಪರು—ಮನ್ಯು, ಮನು, ಮಹಿನಸ್, ಮಹಾನ್, ಶಿವ, ಋತಧ್ವಜ, ಉಗ್ರರೇತ, ಭವ, ಕಾಲ, ವಾಮದೇವ. ಧೃತವ್ರತ. ಸತೀದೇವಿಯರು—ಧೀ, ವೃತ್ತಿ, ಉಶನಾ, ಉಮಾ, ನಿಯುತಿ, ಸರ್ಪಿ, ಇಲಾ, ಅಂಬಿಕಾ, ಇರಾವತಿ, ಸುಧಾ, ದೀಕ್ಷಾ. ಸ್ಥಾನಗಳು—ಹೃದಯ, ಇಂದ್ರಿಯ, ಪ್ರಾಣ, ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಸೂರ್ಯ, ಚಂದ್ರ, ತಪ.

**ಏಕಾದಶ ರುದ್ರಗಣಗಳು**— ಭೂತ, ಪ್ರೇತ, ಪಿಶಾಚ, ಭೈರವಿ, ವಿನಾಯಕ, ಯಾತುಧಾನ, ಡಾಕಿನಿ, ಶಾಕಿನಿ, ಕೂಷ್ಮಾಂಡ, ಭೇತಾಳ, ಯೋಗಿನಿ ಇತ್ಯಾದಿ.

**ಏಕಾದಶವಿಧ ಅಶ್ವಗತಿಗಳು**—ಚಕ್ರಿ, ರೇಚಿತ, ವಲ್ಗಿತ, ಧಾರಿತ, ಆಪ್ಲುತ, ತ್ವರಿತ, ಮಂದ, ಕುಟಿಲ, ಸರ್ಪಣ, ಪರಿವರ್ತನ, ಅಸ್ಕಂಧಿತ.

**ಏಕಾದಶವಿಧ ಗುಣಸ್ಥಾನಗಳು**—(ಉಪಾಸಕ ಕ್ರಮ) ಸಮ್ಯಕ್ತ್ವ, ಅಣುವ್ರತ, ಪ್ರೋಷಧವ್ರತ, ಸಮುತ್ತೀಭಾವ, ಪಲ್ಲೀಸಾಮ್ಯ, ವಿರಾರತಿ ನಿಷೇಧ, ಮಹಾಬ್ರಹ್ಮಚರ್ಯ, ಕಾಮ್ಯಾರಂಭೋಪಹಾಸ, ಪರಿಗ್ರಹಚ್ಯುತಿ (ನಿರ್ಗ್ರಂಥ) ಅಸ್ತಾನುಮೋದ, ಮುನಿಜನ ಮಾರ್ಗಾಚರಣ (ಜೈ)



**ಏಕಾದಶಾಂಗಗಳು**—ಆಚಾರಾಂಗ, ಸೂತ್ರಕೃತಾಂಗ, ಸ್ಥಾನಾಂಗ, ಸಮವಾಯಾಂಗ, ವ್ಯಾಖ್ಯಾಪ್ರಜ್ಞಪ್ತಿ. ಜ್ಞಾತೃ ಧರ್ಮಕಥೆ, ಉಪಾಸಕಾಧ್ಯಯನಾಂಗ, ಅಂತಕೃದ್ದಶಾಂಗ; ಔಪಪಾದಿಕದಶಾಂಗ, ಪ್ರಶ್ನ-ವ್ಯಾಕರಣಾಂಗ, ವಿಪಾಕಸೂತ್ರಾಂಗ (ದೃಷ್ಟಿವಾದವೂಕೂಡಿದರೆ ದ್ವಾದಶ ಶಾಸ್ತ್ರಾಂಗಗಳು)

**ದ್ವಾದಶಕಲಾ**—(ಪ್ರಣವಾತ್ಮಿಕ) ಘೋಷಿಣಿ, ವಿದ್ಯುನ್ಮಾಲಾ, ಪತಂಗಿ, ವಾಯುವೇಗಿನಿ, ನಾಮಧೇಯ, ಐಂದ್ರಿ, ವೈಷ್ಣವಿ, ಶಾಂಕರಿ, ಮಹತಿ, ಧ್ರುವ, ಮೌನಿ, ಬ್ರಾಹ್ಮಿ (ವೇದಾಂತಮಾರ್ಗ) ಸೂರ್ಯ ಸಂಬಂಧ— ತಪಿನಿ ತಾಪಿನಿ, ಧೂಮ್ರಾ, ಮರೀಚಿ, ಜ್ವಾಲಿನಿ; ರುಚಿ; ಸುಷುಮ್ನ; ಭೋಗದಾ; ವಿಶ್ವಬೋಧಿನಿ, ಧರಣಿ; ಕ್ಷಮಾ; ಪ್ರಭಾ.

**ದ್ವಾದಶಕೂಟ**—ಗಣಕೂಟ; ನಾಡಿಕೂಟ; ರಾಶಿ; ದಿನ; ಯೋನಿ; ವಶ್ಯ; ಮಹೇಂದ್ರ ಸ್ತ್ರೀದೀರ್ಘ; ರಜ್ಜು; ವೇಧಾ; ವರ್ಣಕೂಟ; ಗ್ರಹಮೈತ್ರಿ (ಜ್ಯೋ)

**ದ್ವಾದಶಕ್ಷೇತ್ರ** ಮಧುರೆ; ಅಯೋಧ್ಯೆ; ಕಾಶಿ; ಪ್ರಯಾಗೆ; ಕಾಂಚಿ; ದ್ವಾರಕೆ; ಶಾಲಗ್ರಾಮ; ಪದ್ಮನಾಭ; ವಿರೂಪಾಕ್ಷ; ದಂಡಕಾರಣ್ಯ; ವೆಂಕಟಾದ್ರಿ; ಭಾಸ್ಕರಾಚಲ; (ಮುಂಡನಾವಶ್ಯ)

**ದ್ವಾದಶಗ್ರಹ**-ಸ್ಕಂಧ; ವಿಶಾಖ; ಮೇಷ; ಶ್ವಗ್ರಹ; ಪಿತೃಗ್ರಹ; ಪೂತನಾ ಶೀತಪೂತನಾ ದೃಷ್ಟಿಪೂತನಾ(ಅಂಧ)ಮುಖಮಂಡಿಕೆ; ಶಕುನಿ; ರೇವತಿ; ಶುಷ್ಕರೇವತಿ (ಆಯುರ್ವೇದ)

**ದ್ವಾದಶ ಚುಂಬನ**—ನಿಮಿತ್ತಕ; ಸಂಘಟಿಕ; ಸ್ಫುರಿತಕ; ಭ್ರಾಂತಿಕ; ತಿರ್ಯಗಾಯಿಕ;

ಅತಿದೃಷ್ಟಕ; ಉತ್ತರ ಸಂಘಟಿತಕ; ಜಿಹ್ವಾಮೇಳ; ಜಿಹ್ವಕ; ಅತಿ ಜಿಹ್ವಾವಿಳಸ; ಸೀತ್ಕಾರ; ದಂತ, ಕ್ಷತ.

**ದ್ವಾದಶ ಜ್ಞಾನಸೂಚಕ (ಚಿಹ್ನೆಗಳು)**—ರಿಪುಷಡ್ವಾರ್ಗಾಭಿನಯ; ಸ್ವಾಭಾವಿಕ ಶಾಂತಿ; ಸಾತ್ವಿಕ ಸಂಪತ್; ಸರ್ವಭೂತ ಸಮತ್ವ; ವೈರಾಗ್ಯ; ಆಧ್ಯಾತ್ಮನಿಷ್ಠೆ; ನಿಶ್ಚಲತೆ, ಅಹ; ಭಾವವರ್ಜ್ಯ; ನಿತ್ಯತುಷ್ಟಿ; ಭಯಶೋಕಾದಿವರ್ಜನ; ಪಾವಿತ್ರ್ಯ; ಶಿಷ್ಯನನ್ನು ತನ್ನಂತೆ ಮಾಡುವಿಕೆ.

**ದ್ವಾದಶ ತಪೋತ್ಸರ್ಗ**–ಅನಶನ; ಅವೋದರ್ಯ; ವೃತ್ತಿಪರಿ ಸಂಖ್ಯಾನ; ರೂಪರಸತ್ಯಾಗ; ವಿವಿಕ್ತಾವಾಸ; ಕಾಯಕ್ಲೇಶ; ಪ್ರಾಯಶ್ಚಿತ್ತ, ವಿನಯ; ವೈಯಾವೃತ್ಯ; ಸ್ವಾಧ್ಯಾಯ; ಧ್ಯಾನ; ಕಾಯೋತ್ಸರ್ಗ (ಜೈ)

**ದ್ವಾದಶತಾಲ ವಿಭೇದ**—ಕರತೋಳ; ಕಾಂಸ್ಯ; ಜಯಘಂಟಾ; ಶುಕ್ತಿಕಾ; ಕಂಠಿಕಾ; ಪಟವಾದ್ಯ; ಘರ್ಘರ; ಝುಂಝೂ; ಮಂಜೀರ; ಕರ್ತರಿ; ಉಷ್ಕುಲಾ.

**ದ್ವಾದಶ ತೀರ್ಥಗಳು** (ದಿವ್ಯನದಿಗಳು)—ವಿಂಧ್ಯಾದಕ್ಷಿಣಾದಲ್ಲಿ— ಗೋದಾವರಿ; ಭೀಮರಥಿ; ತುಂಗಭದ್ರಾ; ಕೃಷ್ಣವೇಣಿ; ತಾಪಿ; ಪಯೋಷ್ಣಿ. ಉತ್ತರಾಪಥದಲ್ಲಿ-ಭಾಗೀರಥಿ; ನರ್ಮದಾ, ಯಮುನಾ; ಸರಸ್ವತಿ; ವಿಶೋಕ; ವಿತಸ್ತಾ. (ಬ್ರಹ್ಮ-ಪು)

**ದ್ವಾದಶನಿಧಾನ**—ಅವಿದ್ಯೆ; ಸಂಸ್ಕಾರ; ವಿಜ್ಞಾನ; ನಾಮರೂಪ; ಷಡಾಯತನ; ಸ್ಪರ್ಶ; ವೇದನಾ; ತೃಷ್ಣಾ ಉಪಾದಾನ; ಭವ; ಜನನ; ಜರಾ; ಮರಣ (ಚಾ)

**ದ್ವಾದಶ ಪರಿಣಾಮ**—(ಅನ್ನಗತ) ಪಾಕ; ರಸ; ಮಲ; ರಕ್ತ; ರೋಮ, ಕೇಶ; ಅಸ್ಥಿ; ಮಜ್ಜಾ; ಸ್ನಾಯು, ನೆಣ, ವೀರ್ಯ.

**ದಾದಶ ಫಲಗಳು**—ದಾಳಿಂಬ, ತೆಂಗು; ಮಾವು, ಹಲಸು; ಖರ್ಜೂರ, ತಾಲ, ಧಾತ್ರಿ, ಶ್ರೀಫಲ; ಕಿತ್ತೀಳೆ, ತಂಗು, ಕಳಿವೆ, ಜಾಯಿಫಲ.

**ದ್ವಾದಶ ಪುಷ್ಪಗಳು**—ಅಶೋಕ, ಮಲ್ಲಿಕಾ, ಪಾಟಲ, ಕದಂಬ; ಕರವೀರ, ಮೊಲ್ಲೆ, ಮಾಲತಿ, ಕಮಲ (ಶತದಳ) ನೀಲ ಕಮಲ; ವಾಸಂತಿ; ಕುಂದ, ಪುನ್ನಾಗ (ಈ ಫಲ ಪುಷ್ಪಗಳು ಪ್ರತಿ ಮಾಸದಲ್ಲಾಚರಿಸುವ ಪೂಜೆಗವಶ್ಯ)

**ದ್ವಾದಶಬಲ**—ಬಾಹುಬಲ, ದೇಹಬಲ, ಚಂದ್ರ, ಭೂಮಿ, ದೈವ, ದ್ರವ್ಯ, ಗ್ರಹ, ಮೂಲ, ಆತ್ಮ, ಚತುರ್ಬಲ, ಅನುಬಲ, ಬೆಂಬಲ.

**ದ್ವಾದಶಭಾವ**—ತನು, ಕುಟುಂಬ (ಧನ) ಸಹೋತ್ಥ, ಬಂಧು (ಸುಖ-ಮಾತೃ) ಪುತ್ರ (ವಿದ್ಯಾ ಬುದ್ಧಿ) ಶತ್ರು (ಜ್ಞಾತಿ-ಕ್ಲೇಶ) ಕಳತ್ರ (ಸ್ತ್ರೀ-ವ್ಯಾಪಾರ-ಪ್ರಾಪ್ತಿ) ಮರಣ (ಆಯುಃ, ಗತಿ, ಋಣ) ಧರ್ಮ (ಧನ-ಸ್ನೇಹ-ಭಾಗ್ಯ) ಕರ್ಮ (ಕೀರ್ತಿ-ಗೌರವ-ಪ್ರವಾಸಾದಿ) ಲಾಭ (ಮಂಗಲ-ಭೂಷಣ-ಧನಕನಕಾದಿ) ವ್ಯಯ (ಸ್ವರ್ಗ-ನರಕ-ಶಯನ-ತ್ಯಾಗಾದಿ)

**ದ್ವಾದಶಮಾಸಗಳು**—(ಚಾಂದ್ರಮಾನ) ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಿನ, ಕಾರ್ತಿಕ, ಮಾರ್ಗಶಿರ, ಪುಷ್ಯ, ಮಾಘ, ಫಾಲ್ಗುಣ. **ಪುರುಷ**— ವೈಕುಂಠ, ಜನಾರ್ದನ, ಉಪೇಂದ್ರ, ಯಜ್ಞ, ವಾಸುದೇವ, ಹರಿ, ಯೋಗೀಶ, ಪುಂಡರೀಕ, ಕೃಷ್ಣ, ಅನಂತ, ಅಚ್ಯುತ, ಚಕ್ರಿ. **ಶ್ರೀ**—(ಸ್ತ್ರಿ) ಲಕ್ಷ್ಮೀ, ಶ್ರೀ, ಕಮಲ, ಭದ್ರಾ, ಸೀತಾ, ಸತ್ಯಾ, ರುಕ್ಮಿಣಿ, ಮಾಧವಿ, ಚಂದ್ರಿಕಾ, ಭೂದೇವಿ, ತುಲಸಿ, ಜಾಂಭವತಿ. **ಅಧಿಪತಿಗಳು**—ವೇದಾಂಗ, ಭಾನು, ಇಂದ್ರ, ರವಿ, ಗಭಸ್ತಿ, ಯಮ, ಸುವರ್ಣರೇತ, ದಿವಾಕರ, ಮಿತ್ರ, ವಿಷ್ಣು, ಅರುಣ, ಸೂರ್ಯ.

**ದ್ವಾದಶರಾಶಿ**—ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ, ಧನು, ಮಕರ, ಕುಂಭ, ಮೀನ (ಸೌರಮಾಸಗಳು ಇವಾಗಿವೆ) **ಕಾಲಪುರುಷಾವಯವಗಳು**—ಶಿರ, ಮುಖ, ಉರ, ಹೃದಯ, ಭುಜಾಂತ (ಹೊಟ್ಟೆ) ಕಟಿ, ಕೆಳನಾಭಿ, ವ್ಯಂಜನ, ಊರು, ಜಾನುಯುಗ್ಮ, ಜಂಘೆ, ಪಾದದ್ವಯ. **ವರ್ಣ**—ರಕ್ತ, ಶ್ವೇತ, ಶುಕಚ್ಛಾಯೆ, ಪಾಟಲ, ಪೀತ, ಚಿತ್ರ, ಕೃಷ್ಣ, ಸ್ವರ್ಣ, ಪಿಂಗಳ, ಕಪಿಲ, ಬಭ್ರು, ಶುಭ್ರ.

**ದ್ವಾದಶ ವರ್ಣವಿಶೇಷ**—ಬಿಳಿ, ಹಳದಿ, ಕೆಂಪು, ಹಸುರು, ಕಪ್ಪು, ನೀಲಿ; ದೂಸರ, (ಸ್ವಲ್ಪಬಿಳಿ) ಪಾಟಲಿ (ಬಿಳಿ ಕೆಂಪು) ಶೋಣ (ಕೆಂದಾವರೆಯ ಬಣ್ಣ) ಕಪಿಶ (ಕಪು ಹಸುರು) ಧೂಮ್ರ (ಕೆಂಪು ಕಪ್ಪು) ಹರಿಣ (ಬಿಳಿಹಸುರು)

**ದ್ವಾದಶ ವಿಸರ್ಜನಾಂಗಗಳು**—ಕಿವಿಗಳೆರಡು; ಕಣ್ಣುಗಳೆರಡು; ನಖ; ದಂತ; ಜಿಹ್ವಾ; ಓಷ್ಠ; ನಾಸಾಪುಟ; ರೋಮಕೂಪ; ಗುದ; ಮೂತ್ರಾಂಗ.

**ದ್ವಾದಶ ವಿಧಪುತ್ರರು**—ಔರಸ; ಕ್ಷೇತ್ರಜ; ದತ್ತಕ; ಕೃತ್ರಿಮ; ಗೂಢೋತ್ಪನ್ನ; ಅಪವಿದ್ಧ; ಕಾನೀನ; ಸಹೋಢ; ಕ್ರೀತಕ; ಪೌನರ್ಭವ; ಸ್ವಯಂದತ್ತ; ಪಾರಶವ. (ಮನು-ಸ್ಮೃ)

**ದ್ವಾದಶವಿಧ ಪ್ರಪಂಚಾವಸ್ಥೆಗಳು**—ಸೃಷ್ಟಿ; ಸ್ಥಿತಿ; ಲಯ; ನಿಯಮ; ಬಂಧ; ಸುಖ; ದುಃಖ; ಜ್ಞಾನ; ಪ್ರಬೋಧ; ಮೋಕ್ಷ; ಆವೃತಿ; ಜ್ಯೋತಿ (ವೇದಾಂತ)

**ದ್ವಾದಶವಿಧ ರಂಧ್ರವಾದ್ಯಗಳು**—ವಂಶೀ, ಮುರಲೀ, ಮಾಧುರೀ, ತಿತ್ತಿರಿ, ಸ್ವಾರೀ, ಭೃಂಗ, ಭೃಂಗಕಾಳೆ, ಭೃಂಗೀಕಾ, ಕೃಪಾಲಿಕಾ, ತೋರಹಿ, ಸ್ವರನಾಭಿ (ಸಂ-ಶಾ)

**ದ್ವಾದಶ ವಿಧಾಲಿಂಗನ**—ಪುಷ್ಕರ, ದೃಷ್ಟಕ, ಲಲಾಟಿಕ, ವಿವಿಧಕ, ಪೀಡನ, ವೃಕ್ಷಾರೋಹಣ, ಲತಾವೇಷ್ಟನ, ಉಪರೋಪಗೂಹನ, ಜಘನೋಪಗೂಹನ, ತಿಲತಂಡುಲತ್ವ, ಪಯೋದಾಯಿತ, ಸ್ತನಾಶ್ಲೇಷ.

**ದ್ವಾದಶ ವಿಪ್ರಗುಣಗಳು**—ಸತ್ಯ, ಧರ್ಮ, ದಮ, ತಪ, ಹ್ರೀ, ತಿತಿಕ್ಷೆ, ಧೃತಿ, ಅಮಾತ್ಸರ್ಯ, ಅನಸೂಯಾ, ದಾನ, ಯಜ್ಞ, ವ್ರತ.

**ದ್ವಾದಶವಿಧ ಆತ್ಮಲಕ್ಷಣಗಳು**— ನಿತ್ಯ, ಶುದ್ಧ, ಅವ್ಯಯ, ಅದ್ವಿತೀಯ, ಸರ್ವಾಶ್ರಯ, ನಿರ್ವಿಕಾರ, ಸ್ವಪ್ರಕಾಶ, ನಿಸ್ಸಂಗ, ಕಾರಣ, ವ್ಯಾಪಕ, ಪರಿಪೂರ್ಣ, ಕ್ಷೇತ್ರಜ್ಞ.

**ದ್ವಾದಶವಿಧ ಪೂಜಾಸಾಧನಗಳು**— ದ್ರವ್ಯ, ಅಭಿಜನ, ಅಭಿರೂಪ, ಓಜಃ, ತೇಜಃ, ತಪಃ, ಪ್ರಭಾವ, ಪಾಂಡಿತ್ಯ, ಪರಾಕ್ರಮ, ಬುದ್ಧಿ, ಬಲ, ಯೋಗಗಳು.

**ದ್ವಾದಶವಿಧ ಶ್ರಾದ್ಧಗಳು**— ನಿತ್ಯ, ನೈಮಿತ್ತಿಕ, ಕಾಮ್ಯ, ವೃದ್ಧಿ (ಶುಭಕಾರ್ಯಗಳಲ್ಲಿ ಮಾಡತಕ್ಕುದು) ಸಪಿಂಡನ (ಪ್ರೇತಪಿಂಡಗಳ ಮೂಲಕ) ಪಾರ್ವಣ (ಪರ್ವಕಾಲದಲ್ಲಿ ಮಾಡತಕ್ಕುದು) ಗೋಷ್ಠಿ (ಗೋಶಾಲೆಗಳಲ್ಲಾಚರಣೀಯ) ದೈವಿಕ (ಹವಿರ್ದ್ವಾರಾ-ದೇವತಾ ಪ್ರೀತ್ಯರ್ಥ) ಪುಷ್ಟ್ಯರ್ಥ (ಆಯುರ್ವಿತ್ತಾದಿ ವೃದ್ಧ್ಯರ್ಥ) ಶುದ್ಧ್ಯರ್ಥ ಯಾತ್ರಾರ್ಥ, ಕರ್ಮಾಂಗ (ಭವಿಷ್ಯತ್-ಪು)

**ದ್ವಾದಶಾದಿತ್ಯರು**—ಧಾತಾ; ಆರ್ಯಮಾ. ಮಿತ್ರ, ವರುಣ, ಇಂದ್ರ, ವಿವಸ್ವಾನ್, ಪೂಷ, ಪರ್ಜನ್ಯ, ಅಂಶುಮಾನ್, ಭಗ, ತ್ವಷ್ಟ್ರ, ವಿಷ್ಣು. **ಮಾಸಗಳು**—ಮಧು, ಮಾಧವ; ಶುಕ್ಲ; ಶುಚಿ; ನಭ; ನಭಸ್ಯ; ತಪ; ತಪಸ್ಯ; ಸಹ; ಪೌಷ; ಇಷ; ಊರ್ಜ (ಫಾಲ್ಗುಣ)

**ಸೂರ್ಯವ್ಯೂಹ**—(1) ಋಷಿಗಳು— ಪುಲಸ್ತ್ಯ, ಪುಲಹ; ಅತ್ರಿ; ವಸಿಷ್ಠ; ಅಂಗಿರಾ; ಭೃಗು; ಗೌತಮ; ಭರದ್ವಾಜ; ಕಶ್ಯಪ; ಆಯು; ಜಮದಗ್ನಿ; ವಿಶ್ವಾಮಿತ್ರ. (2) **ಗಂಧರ್ವರು**— ತುಂಬುರ; ನಾರದ; ಹಾಹಾ; ಹೂಹು; ವಿಶ್ವಾವಸು; ಉಗ್ರಸೇನ; ಸುಷೇಣ; ವಿಶ್ವಾ; ಋತಸೇನ; ಅರಿಷ್ಟನೇಮಿ; ಧೃತರಾಷ್ಟ್ರ; ಸೂರ್ಯವರ್ಚಾ. (3) **ಅಪ್ಸರೆಯರು**— ಕ್ರತುಸ್ಥಲಿ, ಪುಂಜಿಕಸ್ಥಲೆ, ಮೇನಕಿ, ರಂಭಾ (ಸಹಕನ್ಯೆ) ಪ್ರಮ್ಲೋಚಾ, ಅನುಮ್ಲೋಚಾ, ಘೃತಾಚಿ, ಸೇನಜಿತ್, ಊರ್ವಶಿ, ಪೂರ್ವಚಿತ್ತಿ, ತಿಲೋತ್ತಮೆ, ರಂಭಾ, (4) **ನಾಗಗಳು**— ವಾಸುಕಿ, ಕಚ್ಛನೀರಾ, ತಕ್ಷಕ, ಶುಕ್ರ, ಏಲಾಪತ್ರ, ಶಂಖಪಾಲ, ಧನಂಜಯ, ಇರಾವತ, ಮಹಾಶಂಖ, ಕರ್ಕೋಟಕ, ಕಂಬಲ, ಅಶ್ವತರ. (5) **ರಾಕ್ಷಸರು**— ಹೇತಿ, ಪ್ರಹೇತಿ, ಪೌರುಷೇಯ, ಚಿತ್ರಸ್ವನ, ವರ್ಯ(ದರ್ಪ) ವ್ಯಾಘ್ರ, ವಾತ, ವರ್ಚಾ, ವಿದ್ಯುಚ್ಛತ್ರು, ಸ್ಫೂರ್ಜ, ಬ್ರಹ್ಮಾಪೇತ, ಮಖಾಪೇತ. (6) **ಯಕ್ಷರು**— ರಥಕೃತ್, ಅಥೌಜ, ರಥಸ್ವನ, ಸಹಜನ್ಯ, ಶ್ರೋತಾ, ಅಸಾರಣ, ಸುರುಚಿ, ಕ್ರತು, ತಾರ್ಕ್ಷ್ಯ, ಊರ್ಣ, ಶತಜಿತ್, ಸತ್ಯಜಿತ್ (ಋಷಿಗಳ ಸ್ತುತಿಪಾಠ, ಗಂಧರ್ವರ ಗಾಯನ ಅಪ್ಸರೆಯರ ನೃತ್ಯ, ಯಕ್ಷರ ಸನ್ನಾಹ, ಇತ್ಯಾದಿ ಕಾರ್ಯಕ್ರಮಗಳು ಆಯಾ ಸೂರ್ಯ ಗತಿಗೆ ಸಾನುಕೂಲವಾಗಿ ನಡೆಯಲ್ಪಡುವುವು)

**ದ್ವಾದಶಾನುಪ್ರೇಕ್ಷೆಗಳು**— ಅಧ್ರುವ, ಅಶರಣ, ಏಕತ್ವ, ಅನ್ಯತ್ವ, ಅಶುಚಿತ್ವ, ಸಂಸಾರ, ಲೋಕ, ಆಸ್ರವ, ಸಂವರ, ನಿರ್ಜರ, ಬೋಧಿದುರ್ಲಭ, ಧರ್ಮ-ಸ್ವಾಖ್ಯಾತತ್ವ. (ಜೈ-ಪು)

**ದ್ವಾದಶೋಪನಿಷತ್**— ದಶೋಪನಿಷತ್ತುಗಳು, ಶ್ವೇತಾಶ್ವತರ, ಕೌಶೀತಕ.

**ದ್ವಾದಶಾಂಗಶುದ್ಧಿ**— ಎರಡೆರಡು ಪಾದ-ಹಸ್ತ, ನೇತ್ರ-ಶ್ರವಣ-ನಾಸಿಕಾಪುಟಗಳು; ಮತ್ತು ಮಸ್ತಕ, ಅಂತಃಕರಣ.

**ನಾರಾಯಣನ ದ್ವಾದಶನಾಮಗಳು**—(ನಾಮರೂಪಗಳು) ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ ಶ್ರೀಧರ, ಹೃಷೀಕೇಶ, ಪದ್ಮನಾಭ, ದಾಮೋದರ. **ಸ್ಥಾನಗಳು**—ಲಲಾಟ, ಉದರ, ಹೃದಯ; ಕಂಠ, ದಕ್ಷಿಣಪಾರ್ಶ್ವ, ದಕ್ಷಿಣ ಬಾಹುಮೂಲ, ದಕ್ಷಿಣ ಕರ್ಣ, ವಾಮಪಾರ್ಶ್ವ, ವಾಮ ಬಾಹುಮೂಲ, ವಾಮಕರ್ಣ, ಪೃಷ್ಠ, ಕಕುದ್ದೇಶ.

**ವಿನಾಯಕ ದ್ವಾದಶನಾಮಗಳು**—ಸುಮುಖ, ಏಕದಂತ, ಕಪಿಲ, ಗಜಕರ್ಣಕ, ಲಂಬೋದರ, ವಿಕಟ, ವಿಘ್ನನಾಶ, ಗಣಾಧಿಪ, ಧೂಮ್ರಕೇತು, ಗಣಾಧ್ಯಕ್ಷ, ಭಾಳಚಂದ್ರ, ಗಜಾನನ.

**ಶ್ರೀಕೃಷ್ಣ ದ್ವಾದಶಕ್ರೀಡಾವನಗಳು**—ಮಧುವನ, ತಾಲವನ, ಕಾಮವನ, ಕುಮುದ ಬಹುಲಾ,ಖದಿರ, ಭದ್ರ, ಭಾಂಡೀರ, ಲೋಹ, ಶ್ರೀವನ, ಮಹಾವನ, ವೃಂದಾವನ.

**ಕಶ್ಯಪಬ್ರಹ್ಮರ ತ್ರಯೋದಶ ಪತ್ನಿಯರು**—ದಿತಿ, ಅದಿತಿ, ದನು, ಕಾಷ್ಠೆ, ಅರಿಷ್ಟೆ, ಸುರಸೆ, ತಾಮ್ರೆ, ಸರಮೆ, ಇರಾ; ಕದ್ರು (ಕ್ರೋಧೆ) ವಿನತೆ, ಮುನಿ, ಕಪಿಲೆ.

**ತ್ರಯೋದಶ ಧರ್ಮಪತ್ನಿಯರು**—ಶ್ರದ್ಧಾ, ಲಕ್ಷ್ಮೀ, ಧೃತಿ, ತುಷ್ಟಿ, ಪುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪು, ಶಾಂತಿ, ಸಿದ್ಧಿ, ಕೀರ್ತಿ. **ಸಂತತಿ**—ಕಾಮ, ದರ್ಪ, (ಹೆಮ್ಮೆ) ನಿಯಮ, ಹರ್ಷ, ಲೋಭ, ಶ್ರುತ, ದಂಡ (ನಯ-ವಿನಯ ಕೂಡ) ಬೋಧ, ವಿನಯ (ವಿನಮ್ರ) ವ್ಯವಸಾಯ, ಕ್ಷೇಮ, ಸುಖ, ಯಶ.

**ತ್ರಯೋದಶ ವಿಶ್ವೇದೇವರು**—ಸತ್ಯ, ವಸು, ದಕ್ಷ, ಕ್ರತು, ಧುರಿ, ವಿಲೋಚನ; ಕಾಲ; ಕಾಮಕ; ಪುರೂರವ; ಆರ್ದ್ರ; ಧನು; ರುಚಿ; ಸಂಜ್ಞಕ.

**ತ್ರಯೋದಶ ಶೀಲಗಳು**—ಬ್ರಹ್ಮಜ್ಞಾನ; ದೈವಭಕ್ತಿ; ಗುರುಭಕ್ತಿ; ಸೌಮ್ಯ; ಅನಸೂಯಾ; ಅಪರೋಪತಾಪಿತಾ; ಮಿತ್ರತಾ; ಶರಣ್ಯತಾ; ಪ್ರಿಯವಾದಿತ್ವ; ಕೃತಜ್ಞತ್ವ; ಶಾಂತಿ; ಕಾರುಣ್ಯ, ಅಪಾರುಷ್ಯ.

**ಚತುರ್ದಶ ಅಧ್ಯಾತ್ಮ ಕರಣಗಳು**—(ಜೀವಪರ) ಇಂದ್ರಿಯ ದಶಕ; ಅಂತಃಕರಣ ಚತುಷ್ಟಯ. **ಈಶ್ವರಪರ**—ಕರ್ಮೇಂದ್ರಿಯ ಪಂಚಕ; (ಅಗ್ನಿ, ಇಂದ್ರ, ವಿಷ್ಣು, ಮೃತ್ಯು, ಪ್ರಜಾಪತಿ) ಜ್ಞಾನೇಂದ್ರಿಯ ಪಂಚಕ (ದಿಕ್; ವಾಯು; ಅರ್ಕ; ವರುಣ, ಅಶ್ವಿನೇಯರು) ಅಂತಃರಣ ಚತುಷ್ಟಯ (ಚಂದ್ರ; ಚತುರ್ಮುಖ ಬ್ರಹ್ಮ; ಕ್ಷೇತ್ರಜ್ಞ (ವಿಷ್ಣು) ತ್ರಿಪುರಾರಿ) ಆಧ್ಯಾತ್ಮಿಕ-ಶಾ.

**ಚತುರ್ದಶ ಉಪದಾನಗಳು**—ಆಮಾನ್ನ; ಉದಕುಂಭ; ಉಪಾನಹ; ಕಮಂಡಲ; ಛತ್ರ; ವಸ್ತ್ರ; ಯಷ್ಟಿ; ಲೋಹದಂಡ; ಅಗ್ನಿಷ್ಟಿಕಾ; ದೀಪ; ತಿಲ; ತಾಂಬೂಲ; ಚಂದನ; ಪುಷ್ಪ ಮಾಲಾ.

**ಚತುರ್ದಶ ಚಿತ್ತವೃತ್ತಿಗಳು**— ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಈರ್ಷೆ, ಅಸೂಯೆ, ದಂಭ, ದರ್ಪ, ಅಹಂಕಾರ, ಇಚ್ಛಾ, ಭಕ್ತಿ, ಶ್ರದ್ಧೆ (ಭಕ್ತಿ-ಶ್ರದ್ಧೆ ಗಳು ಮಾತ್ರ ಶುದ್ಧ)

**ಚತುರ್ದಶ ಜರಾಯುಜ ವಿಶೇಷ**—(ಗ್ರಾಮ್ಯ) ಪಶು, ಮಾನವ, ಅಶ್ವ, ಗಾರ್ದಭ, ಅಜ, ಮೇಷ, ಹೇಸರಗತ್ತೆ. ವನ್ಯಪ್ರಾಣಿಗಳು— ಋಕ್ಷ, ವಾನರ, ಗಜ, ಸಿಂಹ, ಸೂಕರ, ಕಾಡೆಮ್ಮೆ; ಮುಳ್ಳುಹಂದಿ. (ಸೂ— ಗಿಡ, ಬಳ್ಳಿ, ಪೊದೆ, ತೃಣ, ತ್ವಕ್ಸಾರ ಈ ಸ್ಥಾವರ ಗಳೂ, ಪಂಚಭೂತಗಳೂ, ಕೂಡಿದರೆ ಗಾಯತ್ರೀರೂಪ-ಉ)

**ಚತುರ್ದಶ ನಾಡಿಗಳು**— ಇಡಾ, ಪಿಂಗಳ, ಸುಷುಮ್ನಾ, ಸರಸ್ವತಿ, ಪೂಷ, ವಾರುಣಿ, ಹಸ್ತಿ, ಪಯಸ್ವಿನಿ, ಅಲಂಬುಸ, ಕುಹು, ಗಾಂಧಾರಿ, ಶಂಖಿನಿ, ಯಶಸ್ವಿನಿ, ವಿಶ್ವೋದರಿ, **ಅಧಿದೇವತೆಗಳು**— ಹರಿ, ವಿಧಿ, ಶಿವ, ವಿರಾಟ್, ದಿಗ್ದೇವತೆ, ವಾಯು, ವರುಣ, ಸೂರ್ಯ, ಜಲ, ಭೂಮಿ, ಚಂದ್ರ, ವರುಣ, ಬ್ರಹ್ಮ, ಅಗ್ನಿ.

**ಚತುರ್ದಶ-ನಿತ್ಯ ವಿಭುತ್ವಗುಣಗಳು**—(ಈಶ್ವರೀಯ) ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಬುದ್ಧಿ, ಇಚ್ಛಾ, ದ್ವೇಷ, ಸುಖ, ದುಃಖ, ಯತ್ನ, ಧರ್ಮ, ಅಧರ್ಮ, ಭಾವನಾ.

**ಚತುರ್ದಶ ಭುವನಗಳು**— ಸಪ್ತಲೋಕಗಳು, ಸಪ್ತಪಾತಾಳಗಳು.

**ಚತುರ್ದಶ ಭೂತಸಮುದಾಯ**— ಅಷ್ಟದೇವಗಣ, ತಿರ್ಯಗ್ಯೋನಿಪಂಚಕ ಮತ್ತು ಮನುಷ್ಯಗಣ.

**ಚತುರ್ದಶ ಮನ್ವಂತರ**— ಸ್ವಾಯಂಭುವ. ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ (ಸೂರ್ಯನ ಮಗ) ದಕ್ಷ ಸಾವರ್ಣಿ (ವರುಣನ ಮಗ) ಬ್ರಹ್ಮಸಾವರ್ಣಿ (ಉಪಶ್ಲೋಕನ ಮಗ) ಧರ್ಮಸಾವರ್ಣಿ, ದೇವಸಾವರ್ಣಿ (ರೌಚ್ಯ) ಇಂದ್ರಸಾವರ್ಣಿ (ಭೌತ್ಯ) ಸೂ— **ಮನ್ವಂತರವೆಂದರೆ** ಇಂದ್ರರು, ಸಪ್ತರ್ಷಿ ಗಳು, ಮನು, ಮನುಪುತ್ರರು, ದೇವತೆಗಳು, ಭಗವದವತಾರಗಳು ಹೀಗೆ ಷಡಧಿಕಾರ ದಿಂದ ಕೂಡಿದುದು. **ಈ ಮನ್ವಂತರ ಕಾಲದಲ್ಲಿದ್ದ ಇಂದ್ರರು**— ಯಜ್ಞ, ರೋಚನ, ಸತ್ಯಜಿತ್, ತ್ರಿಶಿಖ, ವಿಭು, ಮಂತ್ರದ್ರುವ, ಪುರಂದರ, ಬಲಿ, ಅದ್ಭುತ, ರುದ್ರ (ಶಂಭು) ವೈವೃತಿ, ಋತಧಾಮ, ದಿವಸ್ಪತಿ, ಶುಚಿ.

